# ಮೊಗಳ್ಳಿ ಕಥನ : ದಲಿತತ್ವದ ಶೋಧ

ಕನ್ನಡ ಸಾಹಿತ್ಯಾಧ್ಯಯನ ವಿಭಾಗದಲ್ಲಿ
ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಎಂ.ಫಿಲ್. ಸಂಪ್ರಬಂಧ

ಸಂಶೋಧಕರು
ಗಂಜ್ಯಾಳ ಬೋರಮ್ಮ ಬಸವಂತ್ರಾಯ

ಮಾರ್ಗದರ್ಶಕರು
ಮಲ್ಲಿಕಾರ್ಜುನ ವಣೇನೂರು






ಡ ಸಾಹಿತ್ಯಾಧ್ಯಯನ ವಿಭಾಗ
ಭಾಷಾ ನಿಕಾಯ
ನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೭-೨೦೦೮

# ಮೊಗಳ್ಳಿ ಕಥನ : ದಲಿತತ್ವದ ಶೋಧ

ಕನ್ನಡ ಸಾಹಿತ್ಯಾಧ್ಯಯನ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸುತ್ತಿರುವ ಸಂಪ್ರಬಂಧ

ಸಂಶೋಧಕರು
ಗಂಜ್ಯಾಳ ಬೋರಮ್ಮ ಬಸವಂತ್ರಾಯ




ಮಾರ್ಗದರ್ಶಕರು
ಮಲ್ಲಿಕಾರ್ಜುನ ವಣೇನೂರು






ಕನ್ನಡ ಸಾಹಿತ್ಯಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬.
೨೦೦೭-೨೦೦೮

# ಮಾರ್ಗದರ್ಶಕರ ದೃಢೀಕರಣ ಪತ್ರ

**ಮೊಗಳ್ಳಿ ಕಥನ : ದಲಿತತ್ವದ ಶೋಧ** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಗಂಜ್ಯಾಳ **ಬೋರಮ್ಮ** ಬಸವಂತ್ರಾಯ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ದಿನಾಂಕ:**

**ಸ್ಥಳ:** ವಿದ್ಯಾರಣ್ಯ

**ಡಾ. ಮಲ್ಲಿಕಾರ್ಜುನ ವಣೇನೂರು**
ಕನ್ನಡ ಸಾಹಿತ್ಯಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಸಂಶೋಧಕರ ಪ್ರಮಾಣ ಪತ್ರ

**ಮೊಗಳ್ಳಿ ಕಥನ : ದಲಿತತ್ವದ ಶೋಧ** ಎಂಬ ಸಂಪ್ರಬಂಧವನ್ನು ಮಲ್ಲಿಕಾರ್ಜುನ ವಣೇನೂರು ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ, ಎಂ.ಫಿಲ್. ಪದವಿಗಾಗಿ ಭಾಷಾ ನಿಕಾಯದ ಕನ್ನಡ ಸಾಹಿತ್ಯಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಗಂಜ್ಯಾಳ ಬೋರಮ್ಮ ಬಸವಂತ್ರಾಯ)
ಸಂಶೋಧಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

**ದಿನಾಂಕ:**

**ಸ್ಥಳ:** ವಿದ್ಯಾರಣ್ಯ

# ಮೊಗಳ್ಳಿ ಕಥನ : ದಲಿತತ್ವದ ಶೋಧ

## ಪರಿವಿಡಿ

## ಅಧ್ಯಾಯ ಒಂದು

# ಪ್ರವೇಶ, ಅಧ್ಯಯನದ ಮಹತ್ವ, ವ್ಯಾಪ್ತಿ, ವಿಧಾನ

### ಪ್ರವೇಶ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಥನ ಎಂಬ ಪ್ರಕಾರವು ತುಂಬ ವಿಶಿಷ್ಟವಾಗಿ ಕಂಡುಬರುವಂತದ್ದು. ಕಥನ ಎಂಬ ಶಬ್ದವು ಈಚಿನ ದಿನಗಳಲ್ಲಿ ಹೆಚ್ಚಾಗಿ ಬಳಕೆಯಾಗುತ್ತಿದೆ. ಆಂಗ್ಲ ಭಾಷೆಯ Narrative ಗೆ ಸಂವಾದಿಯಾಗಿ ಕನ್ನಡದಲ್ಲಿ ಕಥನ ಎಂಬುದಾಗಿ ಬಳಸಲಾಗುತ್ತದೆ. ಪ್ರಸ್ತುತ ಕಥನವನ್ನು, ಕಾದಂಬರಿಗಳ ಪರ್ಯಾಯವಾಗಿ ಬಳಸುವುದನ್ನು ಕಾಣುತ್ತೇವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಆಂಗ್ಲ ಭಾಷೆಯ ಶಾರ್ಟ್‌ಸ್ಟೋರಿ ಗೆ ಸಂವಾದಿಯಾಗಿ ಕತೆ ಎಂಬುದಾಗಿ ಬಳಸಲಾಗುತ್ತಿತ್ತು. ಕತೆಯು ಅಲ್ಪಕಾಲದಲ್ಲಿ ಓದುಗನಿಗೆ ಕತೆ ಹೇಳುವ ಪ್ರಕಾರವಾಗಿದೆ. ಆದರೆ ಘಟನೆಗಳನ್ನು ವಸ್ತುವಿಷಯಗಳನ್ನು ವಿಸ್ತಾರವಾಗಿ ಹೇಳುವುದನ್ನು ಕಾದಂಬರಿ ಎಂಬುದಾಗಿ ಪರಿಗಣಿಸಲಾಗಿದೆ. ಇದು ಕೂಡಾ ಆಂಗ್ಲಭಾಷೆಯ ನಾವೆಲ್‌ಗೆ ಸಂವಾದಿಯಾಗಿ ಬಳಸಲಾಗುತ್ತದೆ. ಇವೆರಡರ ಕತೆ, ಕಾದಂಬರಿಗಳ ಒಟ್ಟು ಮೊತ್ತ. ಲೇಖಕನ ಆಲೋಚನೆಯ ಮೊತ್ತ, ಗ್ರಹಿಕೆಯ ಮೊತ್ತವಾಗಿ ಕಥನ ಎಂಬುದಾಗಿ ಬಳಸಿಕೊಳ್ಳಲಾಗುತ್ತದೆ. ಈ ಆಧುನಿಕ ಕನ್ನಡ ಸಾಹಿತ್ಯದ ಪ್ರಕಾರಗಳಲ್ಲಿ ಪರಿಭಾಷೆಯಾಗಿ ಬಳಕೆಯಾಗುತ್ತಿರುವ ಕಥನ ಸಾಹಿತ್ಯದ ಘಟ್ಟಗಳಾದ ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಅಷ್ಟೇ ಅಲ್ಲ ಇಂದಿನವರೆಗೂ ಇದನ್ನು ಹಲವಾರು ಕಥೆ ಕಾದಂಬರಿಕಾರರು ತಮ್ಮ ಸಾಹಿತ್ಯದ ಮಾಧ್ಯಮವನ್ನಾಗಿ ಬಳಸಿಕೊಳ್ಳುತ್ತಾ ಬಂದಿದ್ದಾರೆ.

ಇಂತಹ ಕಥನ ಮಾಧ್ಯಮಕ್ಕೆ ಹರಿಕಾರರಾದ ಕುವೆಂಪು, ಕಾರಂತ, ಮಾಸ್ತಿಯಂತ ನವೋದಯ ಕಾಲದ ಗದ್ಯಕಾರರು ಹಾಗೂ ನಂತರದ ಲಂಕೇಶ್, ದೇವನೂರು, ತೇಜಸ್ವಿ, ಚಿತ್ತಾಲ ಮತ್ತು ಅನಂತಮೂರ್ತಿಯವರು ಕನ್ನಡದಲ್ಲಿ ಕಥನದ ಸಾಧ್ಯತೆಗಳನ್ನು ವಿಸ್ತರಿಸಿದವರು. ಆ ನಂತರದ ಕನ್ನಡದ ಕಥನಕಲೆಯಲ್ಲಿ ತನ್ನದೇ ಆದ ವಿಶಿಷ್ಟ ಛಾಪು ಮೂಡಿಸಿದ, ಸಶಕ್ತ ಕಾವ್ಯಾತ್ಮಕ ಗದ್ಯದ ಮಾದರಿಯೊಂದನ್ನು ಸೃಷ್ಟಿಸಿದವರಲ್ಲಿ ಮೊಗಳ್ಳಿಯವರು ಅಗ್ರಗಣ್ಯರು. ಕಥನಕಲೆಯನ್ನು ತನ್ನ ಮುಖ್ಯ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಬಳಸಿಕೊಂಡ ಮೊಗಳ್ಳಿ ಗಣೇಶ್ ಅವರ ಕಥನವನ್ನು ಮತ್ತು ಆ ಕಥನದ ಮೂಲಕ ಅಭಿವ್ಯಕ್ತಿಗೊಳ್ಳುವ ದಲಿತತ್ವದ ಶೋಧವನ್ನು ಈ ಅಧ್ಯಯನದ ಮೂಲಕ ಕೈಗೊಳ್ಳಲಾಗಿದೆ.

### ಅಧ್ಯಯನದ ಮಹತ್ವ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ವಿವಿಧ ಜಾತಿ ಜನಾಂಗಗಳ ವೈವಿಧ್ಯತೆಯ ಬದುಕು ಅನಾವರಣಗೊಂಡಿರುವುದು ಇದೇ ಮೊದಲು. ಇಂತಹ ಸಂವೇದನೆಗಳು ಪ್ರವೇಶಿಸಲು ಅನುಕೂಲ ಮಾಡಿಕೊಟ್ಟ ಕಥನ ಕ್ಷೇತ್ರ ತನ್ನ ಕ್ಷಿತಿಜವನ್ನು ವಿಸ್ತರಿಸಿಕೊಂಡಿದೆ. ಅದರಲ್ಲೂ ಅಸ್ಪೃಶ್ಯತೆಯ ಅವಮಾನದಿಂದ ತಿರಸ್ಕರಿಸಲ್ಪಟ್ಟ ಅಕ್ಷರಸ್ಥ ಸಮುದಾಯವೊಂದು

ತಮ್ಮದೇ ಆದ ಅನುಭವಗಳನ್ನು ಅಭಿವ್ಯಕ್ತಿಸುವ ಕ್ರಮವೊಂದು ಹುಟ್ಟಿಕೊಂಡಿತು. ಇದನ್ನು ದಲಿತ ಸಾಹಿತ್ಯ ಸಮುದಾಯ ಎಂದು ಗುರುತಿಸಲಾಯಿತು. ಇಂತಹ ಪ್ರಕ್ರಿಯೆಯನ್ನು ದಲಿತ ಸಾಹಿತ್ಯ ಘಟ್ಟ ಎಂದು ಆಧುನಿಕ ಕನ್ನಡ ಸಾಹಿತ್ಯದ ಘಟ್ಟಗಳಲ್ಲಿ ನಾಲ್ಕನೆಯ ಘಟ್ಟ ಎಂದು ಪರಿಗಣಿಸಲಾಯಿತು. ಇದರಲ್ಲಿ ಹಲವಾರು ದಲಿತ ಸಾಹಿತಿಗಳು ಕಂಡುಬರುತ್ತಾರೆ. ಪ್ರಮುಖವಾಗಿ ದೇವನೂರು ಮಹಾದೇವ, ಸಿದ್ದಲಿಂಗಯ್ಯ, ಮುಂತಾದವರನ್ನು ಹೆಸರಿಸಬಹುದು. ಇವರೆಲ್ಲರೂ ದಲಿತ ಸಾಹಿತ್ಯದಲ್ಲಿ ಅಗಾಧವಾದ ಸಾಧನೆಯನ್ನು ಮಾಡಿದವರು. ದಲಿತ ಸಾಹಿತಿ ಎಂದು ಪ್ರತ್ಯೇಕವಾಗಿ ಹಣೆಪಟ್ಟಿ ಹಚ್ಚಿಕೊಳ್ಳದಿದ್ದಾಗ್ಯೂ ಹುಟ್ಟಿನಿಂದ ದಲಿತರಾದ ಕಾರಣ ಮೊಗಳ್ಳಿ ಅವರ ಕಥನಗಳಲ್ಲಿ ಅಭಿವ್ಯಕ್ತಿಗೊಂಡ ದಲಿತ ಜೀವನ ವಿಧಾನವನ್ನು ಅರ್ಥೈಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗುವುದು. ಕನ್ನಡದಂತ ಸಾಹಿತ್ಯ ಸಂದರ್ಭದಲ್ಲಿ ಮೊಗಳ್ಳಿಯವರ ಸಾಹಿತ್ಯ ತುಂಬಾ ಸತ್ವಶಾಲಿ ಹಾಗೂ ವೈವಿಧ್ಯಮಯವಾಗಿ ಮೂಡಿಬಂದಿದೆ. ದಲಿತರ ಜೀವನ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳನ್ನೊಳಗೊಂಡಂತೆ ದಲಿತತ್ವದ ಆಶಯಗಳು ಸಮರ್ಥವಾಗಿ ಅವರ ಸಾಹಿತ್ಯದ ಮೂಲಕ ಅಭಿವ್ಯಕ್ತಗೊಂಡಿವೆ. ಮೊಗಳ್ಳಿಗಣೇಶ್ ಅವರು ತಮ್ಮ ಕಥನಕಲೆಯ ಮೂಲಕ ದಲಿತರ ಸಾಮಾಜಿಕ ಬದುಕಿನ ಭೂತ ಭವಿತವ್ಯದ ಮತ್ತು ವರ್ತಮಾನದ ಸಂಗತಿಗಳು ಅವರ ಸೃಜನಶೀಲ ಕೃತಿಗಳಲ್ಲಿ ಮೈದಾಳಿರುವುದನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ 'ಮೊಗಳ್ಳಿಯವರ ಕಥನಗಳಲ್ಲಿ ದಲಿತತ್ವದ ಶೋಧ' ಅಧ್ಯಯನವನ್ನು ಕೈಗೊಳ್ಳಲಾಗಿದೆ. ದಲಿತ ಲೋಕ ಅವರ ಕೃತಿಗಳಲ್ಲಿ ಹೇಗೆ ಅನಾವರಣಗೊಂಡಿದೆ? ಭಾರತೀಯ ಸಮಾಜದಲ್ಲಿನ ಅಸ್ಪೃಶ್ಯ ವ್ಯವಸ್ಥೆಯ ಕರಾಳತೆಗೆ ಅವರ ಪ್ರತಿಸ್ಪಂದನೆ ಯಾವ ಬಗೆಯದು? ಪ್ರಸ್ತುತ ಇರುವ ದಲಿತತ್ವದ ಕುರಿತಾದ ವ್ಯಾಖ್ಯಾನಗಳನ್ನೊಳಗೊಂಡಂತೆ ಭಿನ್ನ ನೆಲೆಯಲ್ಲಿ ಅವರ ಕಥನಕ್ರಮವನ್ನು ಅರ್ಥೈಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ.

**ಅಧ್ಯಯನ ವಿಧಾನ**

ಆಧುನಿಕ ಕನ್ನಡ ಕಥನಗಳ ಅಧ್ಯಯನಕ್ಕೆ ಅದರದೇ ಆದ ಅಧ್ಯಯನದ ಮಾದರಿ ಇಲ್ಲ. ಕಳೆದ ಶತಮಾನದಲ್ಲಿ ಲೋಹಿಯಾವಾದ, ಅಂಬೇಡ್ಕರ್‌ವಾದ ಮತ್ತು ಪೆರಿಯಾರ್ ಚಿಂತನಾಕ್ರಮವನ್ನು ಅಳವಡಿಸಿಲ್ಲ. ವೈಜ್ಞಾನಿಕ ಸತ್ಯಗಳ ವೈಚಾರಿಕ ವಿಧಾನಗಳಿಂದಲೇ ಎಲ್ಲವನ್ನೂ ಅರ್ಥಮಾಡಿಕೊಳ್ಳುತ್ತೇವೆ ಎನ್ನುವ ವಿಧಾನವನ್ನು ಯಥಾವತ್ತಾಗಿ ಬಳಸಿಲ್ಲ. ಈ ವಿಧಾನದಲ್ಲಿಯೇ ಒಂದು ಕೊರತೆಯಿದೆ. ಕರ್ನಾಟಕದಲ್ಲಿ ಎಲ್ಲ ಪ್ರಗತಿಪರ ಚಿಂತನ ಕ್ರಮ ಸಂಸ್ಕೃತಿ ಚಿಂತನೆಯನ್ನು ಅರ್ಥೈಸಿಕೊಳ್ಳುವ ಹುಡುಕಾಟದಲ್ಲಿವೆ. ವಿಚಾರವಾದದ ಬಿಗಿ ಇದರಲ್ಲಿಲ್ಲ. ಈ ಬಿಕ್ಕಟ್ಟನ್ನು ಎಲ್ಲ ಅಧ್ಯಯನಗಳು ಅನುಭವಿಸುತ್ತಿವೆ. ಸಾಹಿತ್ಯ ಚಿಂತನೆ ಅನ್ನುವಂತದ್ದು ಸಂಸ್ಕೃತಿ ಚಿಂತನೆಯಾಗಿ ವಿಸ್ತರಿಸಿಕೊಳ್ಳುತ್ತದೆ. ಹೀಗಾಗಿ ಮೊಗಳ್ಳಿ ಗಣೇಶ್ ಕಥನಗಳಲ್ಲಿ ದಲಿತ ಸಂಸ್ಕೃತಿಯ ಕುರಿತು ತಾತ್ವಿಕವಾದ ಮತ್ತು ಸೈದ್ಧಾಂತಿಕವಾದ ಅಧ್ಯಯನ ವಿಧಾನದಿಂದ ಇಲ್ಲಿ ಅಧ್ಯಯನ ಮಾಡಲಾಗಿದೆ.

**ಅಧ್ಯಯನ ವ್ಯಾಪ್ತಿ**

ಮೊಗಳ್ಳಿ ಕಥನ : ದಲಿತತ್ವದ ಶೋಧ ಎಂಬ ವಿಷಯದ ಹಿನ್ನೆಲೆಯಲ್ಲಿ ನನ್ನ ಅಧ್ಯಯನ ಇರುವುದರಿಂದ ಮೊಗಳ್ಳಿಯವರ ಕಥನಗಳಲ್ಲಿ ನನ್ನ ಅಧ್ಯಯನದ ಆಕರಗಳನ್ನಾಗಿ ತೆಗೆದುಕೊಳ್ಳಲಾಗುವುದು. ಮೊಗಳ್ಳಿಯವರ ಸಣ್ಣಕಥೆ, ಕಾದಂಬರಿ, ಕಾವ್ಯ, ವಿಮರ್ಶೆ, ಲಲಿತ ಪ್ರಬಂಧ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಕೃಷಿಯನ್ನು ಮಾಡಿದ್ದರೂ ಸಹಿತ ನನ್ನ ಅಧ್ಯಯನದ ಅನುಕೂಲಕ್ಕಾಗಿ ಅವರ ಕಥನಗಳನ್ನು ಮಾತ್ರ ಅಧ್ಯಯನದ ವ್ಯಾಪ್ತಿಯಲ್ಲಿ ತೆಗೆದುಕೊಳ್ಳಲಾಗಿದೆ. ಅವರ ಕಥನಗಳಲ್ಲಿ ದಲಿತತ್ವದ ಕುರಿತು ಅಧ್ಯಯನ ಮಾಡುತ್ತಿರುವುದರಿಂದ ದಲಿತ ವಿಷಯಕ್ಕೆ ಸಂಬಂಧಿಸಿದ ಕಥೆಗಳನ್ನು ಮಾತ್ರ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಸೇರಿಸಿಕೊಳ್ಳಲಾಗಿದೆ.

## ಅಧ್ಯಾಯ ಎರಡು

# ಕನ್ನಡ ಕಥಾಲೋಕ ಮತ್ತು ದಲಿತ ಸಂವೇದನೆ

ಕನ್ನಡ ಕಥೆಗಳಲ್ಲಿ ಚಿತ್ರಿತಗೊಂಡಿರುವ ದಲಿತ ಲೋಕ ಮತ್ತು ಕನ್ನಡ ಕಥನಕಾರರು ತಮ್ಮ ಕಥನಗಳ ಮೂಲಕ ದಲಿತರ ನೋವು ಮತ್ತು ನಲಿವುಗಳಿಗೆ ಹೇಗೆ ಸ್ಪಂದಿಸಿದ್ದಾರೆ ಎಂದು ತಿಳಿದುಕೊಳ್ಳುವುದಕ್ಕಿಂತ ಮುಂಚಿತವಾಗಿ ದಲಿತ ಸಂವೇದನೆ ಎಂದರೇನು, 'ದಲಿತರು' ಎಂದರೆ ಯಾರು, ಸಂವೇದನೆ ಎಂದರೆ ಏನು? ಮುಂತಾದ ಅರ್ಥಗಳನ್ನು ತಿಳಿಯುವುದು ಅವಶ್ಯವಾಗಿರುತ್ತದೆ.

ದಲಿತ ಎನ್ನುವ ಪದದ ಅರ್ಥ ದಳ, ಗುಂಪು, ಸೈನ್ಯ, ಶೋಷಿತ ಎನ್ನುವ ಅರ್ಥಗಳು ಶಬ್ದಕೋಶದಲ್ಲಿ ಕಂಡುಬರುತ್ತದೆ. ದಲಿತರು ಎಂದರೆ ಶೋಷಿತರು, ಅಸ್ಪೃಶ್ಯರು, ಆದಿವಾಸಿಗಳು, ಕೆಳಜಾತಿಯವರು, ಕರಿಯ ಜನರು, ಹೀನವಾದ ಉದ್ಯೋಗವನ್ನು ಮಾಡುವವರು ಮುಂತಾದ ಅರ್ಥಗಳಲ್ಲಿ ಅವರನ್ನು ಅರ್ಥೈಸಲಾಗುತ್ತದೆ. ಕರಿ, ಕೆಂಪು, ಕಂದು ಜನರನ್ನು ದಲಿತರೆಂದು ಅಮೇರಿಕಾದಲ್ಲಿ ಅನ್ವಯಿಸಲಾಗುತ್ತದೆ. ಇನ್ನು ಕೆಲವು ದೇಶಗಳಲ್ಲಿ ಅಸ್ಪೃಶ್ಯ, ಆದಿವಾಸಿ, ಶೋಷಿತ ಜನರನ್ನು ದಲಿತರೆಂದು ಕರೆಯಲಾಗುತ್ತದೆ. ಒಟ್ಟಾರೆಯಾಗಿ ದಲಿತರು ಎಂದರೆ ಶೋಷಿತರು, ಜಾತಿವ್ಯವಸ್ಥೆ ಮತ್ತು ಅವರ ಸಮಗ್ರ ವೈಚಾರಿಕ ವ್ಯವಸ್ಥೆಯನ್ನು ನಾಶಮಾಡ ಬಯಸುವವರು, ಈ ಜಗತ್ತನ್ನು ಮರುಕಟ್ಟಬಯಸುವವರು ಎಂದು ಅರ್ಥೈಸಲಾಗುತ್ತದೆ. ಅಲ್ಲದೆ ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಯಾರು ಧಮನಕ್ಕೆ ಒಳಗಾಗಿರುತ್ತಾರೋ ಅವರೆಲ್ಲರು ದಲಿತರು ಎಂದು ಅರ್ಥೈಸಲಾಗುತ್ತದೆ. ಇನ್ನು 'ದಲಿತರು' ಎಂದರೆ ಯಾರು ಎಂತವರನ್ನು ನಾವು ದಲಿತರು ಎಂದು ಕರೆಯುತ್ತೇವೆ ಎನ್ನುವುದನ್ನು ಕೆಲವು ದಲಿತ ವಿದ್ವಾಂಸರು ತಮ್ಮದೆ ಆದ ವ್ಯಾಖ್ಯಾನವನ್ನು ಕೊಟ್ಟಿದ್ದಾರೆ.

**ಡಾ. ಅರವಿಂದ ಮಾಲಗತ್ತಿ**

ಶತಮಾನಗಳಿಂದ ಜನ ಸಮುದಾಯದಲ್ಲಿ ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕವಾಗಿ ಶೋಷಣೆಗೆ ಒಳಗಾದವರು ಒಟ್ಟು ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ ಊರ ಹೊರಗೆ ವಾಸಿಸಿ ಕೀಳುವೃತ್ತಿಗೆ ಅವಲಂಬಿತವಾಗಿ ಹೆಸರು ಹೇಳಿಕೊಳ್ಳಲು ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲರೂ ದಲಿತರೆನಿಸಿಕೊಳ್ಳುತ್ತಾರೆ.

**ಡಾ. ಸಿದ್ಧಲಿಂಗಯ್ಯ**

ದಲಿತರೆಂದು ಗುರುತಿಸಿಕೊಳ್ಳಬೇಕಾದರೆ ದಲಿತನಾಗಿ ಹುಟ್ಟಿರಬೇಕು. ದಲಿತರ ಬಗ್ಗೆ ಅನುಕಂಪವನ್ನು ಹೊಂದಿರಬೇಕು. ದಲಿತ ಶೋಷಣೆ ಮತ್ತು ದಬ್ಬಾಳಿಕೆಯ ಬಗ್ಗೆ ಪ್ರತಿಭಟನೆ ಮಾಡಬೇಕು. ಇವುಗಳ ಜೊತೆ ಆತ ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ಶೋಷಿಸಲ್ಪಟ್ಟವನಾಗಿರಬೇಕು. ತನ್ನ ಶೋಷಣೆಯ

ಪ್ರಜ್ಞೆಯಿಂದ ತನ್ನ ಹಕ್ಕುಗಳ ಬಗ್ಗೆ ಅರಿವು 'ಇರುವವನು' ದಲಿತ ಇಂಥವರು ದಲಿತರು ಎಂದು ಅವರು ವ್ಯಾಖ್ಯಾನಿಸುತ್ತಾರೆ.

ಒಟ್ಟಾರೆಯಾಗಿ ದಲಿತರೆಂದರೆ ಭಾರತದ ಜಾತಿವ್ಯವಸ್ಥೆಯ ಶ್ರೇಣೀಕರಣದಲ್ಲಿ ಅತ್ಯಂತ ಕೆಳಗಿನ ಶ್ರೇಣಿಯವರು. ಅವರು ಶೋಷಣೆಗೆ ಒಳಗಾದವರು, ಹೀನವಾಗಿ ಕಾಣಿಸಿಕೊಂಡವರು. ಕೇರಿಯಲ್ಲಿ ಹೀನವಾಗಿ ಜೀವನ ಮಾಡುವವರು. ಮತ್ತೆ ಈ ಎಲ್ಲವುಗಳ ಬಗ್ಗೆ ಅರಿವು ಇರುವವರು. ಇವುಗಳ ಕುರಿತು ಪ್ರತಿಭಟನೆ ಮಾಡುವವರು ದಲಿತರು ಎಂದು ಗುರುತಿಸಲಾಗಿದೆ.

ದಲಿತ ಸಂವೇದನೆ ಎಂದರೆ ಇಂತಹ ದಲಿತರ ಕುರಿತಾದ ವಾದವೇ ಅವರ ಕುರಿತಾದ ಅನುಭವ. ಅವರ ನೋವುಗಳ ಕುರಿತು ತಮ್ಮ ಸಾಹಿತ್ಯದಲ್ಲಿ ಪ್ರತಿಬಿಂಬಿಸುವುದು ಅವರ ಬದುಕನ್ನು ಅವರ ಕಷ್ಟ ಸುಖಗಳಿಗೆ ಸ್ಪಂದಿಸುವುದು ಎಂದು ತಿಳಿಯಲಾಗುತ್ತದೆ.

'ದಲಿತ ಸಂವೇದನೆ' ಎನ್ನುವುದು ೧೮ ನೇ ಶತಮಾನದ ಆಧುನಿಕ ಕನ್ನಡ ಸಾಹಿತ್ಯದ ಹೊಸ ಚಿಂತನೆಯಾಗಿ ಬೆಳೆದು ಬಂದಿದೆ. ಇದೊಂದು ಮಾರ್ಕ್ಸ್‌ವಾದಿ ಮತ್ತು ಸಮಾಜವಾದಿ ವಿಮರ್ಶೆಯ ನೆಲೆಯಲ್ಲಿ ಹುಟ್ಟಿಕೊಂಡಿರುವಂತಹದ್ದು. 'ಸಂವೇದನೆ' ಎಂಬ ಪದದ ಅರ್ಥ ಏನೆಂದರೆ, ಸಂವೇದನೆ ಎಂಬ ಪದ ಜೀವಂತಿಕೆಯನ್ನು ಪ್ರತಿಬಿಂಬಿಸುವ ಲಕ್ಷಣವಾಗಿ ಕಂಡುಬರುತ್ತದೆ. "ವೇದನೆ ಮತ್ತು ಸಂವೇದನೆ ಎಂಬ ಪದಗಳು ಎರಡು ಒಂದೇಯಾಗಿ ಕಂಡರೂ ವೇದನೆಗೂ ಮತ್ತು ಸಂವೇದನೆಗೂ ಅರ್ಥ ಬೇರೆ ಬೇರೆಯಾಗಿ ಕಂಡುಬರುತ್ತದೆ. ವೇದನೆ ಎಂದರೆ ಬರಿ ನೋವು ದೇಹದ ಅಥವಾ ಮನಸ್ಸಿನ ನೋವು ಎಂದು ಆದರೆ 'ಸಂವೇದನೆ' ಎಂದರೆ ನೋವಿದ್ದರೂ ನೋವಿನ ಹಿಂದೆ ಚಿಂತನೆ ಭಾವನಾ ಪ್ರಧಾನ ನೋವು ಅದಕ್ಕಾಗಿ ಇದನ್ನು ಜೀವಂತಿಕೆಯ ಲಕ್ಷಣ ಎಂದು ಕರೆಯುತ್ತಾರೆ."[೧]

"ಸಂವೇದನೆ ಎನ್ನುವುದು ಇಂಗ್ಲೀಷಿನ 'ಸೆನ್ಸಿಬಿಲಿಟಿ' ಎಂಬ ಪದದಿಂದ ಬಂದಿರುವುದಾಗಿದೆ. ಇದು ಯಾವುದೇ ಅನುಭವಕ್ಕೆ ವ್ಯಕ್ತಿಯೊಬ್ಬನ ವಿಶಿಷ್ಟವಾದ ಭಾವನಾತ್ಮಕ ಮತ್ತು ಬೌದ್ಧಿಕ ಪ್ರತಿಕ್ರಿಯೆ"[೨] ಆಗಿ ಕಂಡುಬರುತ್ತದೆ. "ಒಬ್ಬ ವ್ಯಕ್ತಿಯ ಅನುಭವಕ್ಕೆ ಭಾವನಾತ್ಮಕವಾಗಿ ಹಾಗೂ ಬೌದ್ಧಿಕವಾಗಿ ವಿಶಿಷ್ಟವಾದ ಪ್ರತಿಕ್ರಿಯೆಯನ್ನು ನೀಡಿದರೆ ಅದನ್ನು ನಾವು ಸಂವೇದನೆ"[೩] ಎಂಬ ಪದದಿಂದ ಗುರುತಿಸಲಾಗುತ್ತದೆ. ಇದನ್ನೆ ಸ್ವಲ್ಪ ವಿಸ್ತರಿಸಿ ನೋಡಿದರೆ "ಬಾಹ್ಯಾನುಭವವನ್ನು ನಿರ್ದಿಷ್ಟ ಪ್ರಜ್ಞೆಯೊಂದರ ಮೂಲಕ ಗ್ರಹಿಸುವ ಸಂದರ್ಭ. ಸಂವಹಿಸುವ ಸಾಮರ್ಥ್ಯವನ್ನು ಇದು ಸೂಚಿಸುತ್ತದೆ."[೪]

ನಮ್ಮ ಕನ್ನಡ ಸಾಹಿತ್ಯದಲ್ಲಿ ಹರಳುಗಟ್ಟಿದ ದಲಿತವಾದವನ್ನು ಮತ್ತು ದಲಿತಪರ ಚಿಂತನೆಯನ್ನು ಕನ್ನಡ ಸಾಹಿತ್ಯವಿಮರ್ಶೆಯಲ್ಲಿ ಅನಾವರಣಗೊಳಿಸುವ ಈ ಪ್ರಯತ್ನದ ಮೂಲವನ್ನು ದಲಿತ ಸಂವೇದನೆ ಎಂಬ ಪದದ ಮೂಲಕ ಆರಂಭಿಸಲಾಗುತ್ತದೆ.

ಸಮೂಹದಲ್ಲಿ ಬದುಕಿರುವ ಮಾನವರಲ್ಲಿ ಮೇಲು, ಮತ್ತು ಕೀಳು, ಬಿಳಿಯ, ಕರಿಯ, ಮೇಲ್ಜಾತಿ ಮತ್ತು ಕೆಳಜಾತಿ ಎಂಬ ಕಲ್ಪನೆ ಬೇರೆ ಬೇರೆಯಾಗ ಕಂಡುಬರುತ್ತದೆ. ಮೇಲ್ಜಾತಿಯವರಿಗೆ ಪರಿಚಿತವಾದ ಬೌತಿಕ, ಮಾನಸಿಕ, ಸಾಮಾಜಿಕ, ಆರ್ಥಿಕ, ವೈಜ್ಞಾನಿಕ, ಸಾಮಾನ್ಯ ಪ್ರಪಂಚವಿದ್ದ ಹಾಗೆ ದಲಿತರಿಗೂ ಕೂಡಾ ಅವರದೆ ಆದ ಭೌತಿಕ, ಮಾನಸಿಕ, ಸಾಮಾಜಿಕ, ಪ್ರಪಂಚವಿರುತ್ತದೆ. ಈ ಒಂದು ಹಿನ್ನೆಲೆಯಲ್ಲಿ ದಲಿತರ ಸ್ವಂತ ಗ್ರಹಿಕೆಯ ಸ್ವೀಕಾರದ ಲಯ, ಗತಿ, ತೀವ್ರತೆಗಳು ಭಿನ್ನವಾದವು. ಅದಕ್ಕೆ ಈ ಭಿನ್ನತೆಯನ್ನು ಅದರ ಬದುಕನ್ನು ನೋಡುವ ಅವರ ದೃಷ್ಟಿಕೋನಕ್ಕೆ ಇದು ಒಂದು ವಿಶಿಷ್ಟತೆಯನ್ನು ತಂದುಕೊಟ್ಟಿದೆ. ದಲಿತರ ಈ ಮಾನವನ್ನು ದಲಿತನಾಗಿ ಆಲಿಸುವ ಮತ್ತು ಬಗೆಯುವ ನೆಲೆ ಏನಿದೆಯೊ ಅದನ್ನು ದಲಿತ ಸಂವೇದನೆಯ ನೆಲೆ ಎಂದು ಗುರಿತಿಸಲಾಗುತ್ತದೆ.

'ದಲಿತ ಸಂವೇದನೆ' ಎನ್ನುವುದು ದಲಿತ ಸಾಹಿತಿಗಳ ಸಂವೇದನೆ ಮಾತ್ರವಾಗಬೇಕೆ? ದಲಿತೇತರ ಸಾಹಿತ್ಯದಲ್ಲಿಯೂ ದಲಿತ ಸಂವೇದನೆ ಯಾಕೆ ಇರಬಾರದು? ದಲಿತೇತರಿಗೆ ಇಂತಹ ಒಂದು ದಲಿತ ಲೋಕವನ್ನು

ಚಿತ್ರಣ ಮಾಡಲು ಅಸಾಧ್ಯವೆ? ಒಂದು ವೇಳೆ ಸಾಧ್ಯವಾದರೆ ಅವರ ಸಾಹಿತ್ಯದಲ್ಲಿ ದಲಿತರ ಬದುಕು ಹೇಗೆ ಕಂಡುಬರುತ್ತದೆ? ಎಂಬ ಚರ್ಚೆ ದಲಿತ ಸಂವೇದನೆಯನ್ನು ಕುರಿತು ಅಧ್ಯಯನ ಮಾಡುವ ಎಲ್ಲ ಅಧ್ಯಯನಕಾರರಿಗೂ ಎದುರಾಗುತ್ತದೆ. ಅಲ್ಲದೆ ಇದರ ಕುರಿತು ಹಲವಾರು ವಿದ್ವಾಂಸರು ತಮ್ಮ ತಮ್ಮ ಅಭಿಪ್ರಾಯಗಳನ್ನು ಪ್ರತಿಪಾದಿಸುತ್ತಾ ಬಂದಿರುತ್ತಾರೆ.

ಪ್ರಸ್ತುತ ನನ್ನ ಅಧ್ಯಯನದ ವಿಷಯ ದಲಿತ ಸಾಹಿತಿಯಾಗಿರತಕ್ಕಂತಹ ಮೊಗಳ್ಳಿಗಣೇಶ್ ಅವರ ಕಥನಗಳಲ್ಲಿ ದಲಿತತ್ವದ ಶೋಧವಾಗಿರುವುದರಿಂದ ಮೊಗಳ್ಳಿಯವರು ದಲಿತ ಬದುಕನ್ನು ಹೇಗೆ ಕಂಡಿದ್ದಾರೆ ಇನ್ನು ದೇವನೂರು ಅವರನ್ನೊಳಗೊಂಡಂತೆ ಇನ್ನುಳಿದ ದಲಿತ ಲೇಖಕರು ಹೇಗೆ ದಲಿತ ಬದುಕನ್ನು ತಮ್ಮ ಕಥನಗಳಲ್ಲಿ ಅಭಿವ್ಯಕ್ತಿಸಿದ್ದಾರೆ ಎಂದು ಸೂಕ್ಷ್ಮವಾಗಿ ಅಧ್ಯಯನ ಮಾಡುವುದು ಈ ಪ್ರಸ್ತುತ ಅಧ್ಯಾಯದ ಉದ್ದೇಶವಾಗಿದೆ.

ನಮ್ಮ ಕನ್ನಡ ಸಾಹಿತ್ಯದಲ್ಲಿ ಕನ್ನಡ ಕಥನಗಳು ಕಂಡುಬರುವುದು ಜಾನಪದ ಸಾಹಿತ್ಯದಿಂದಲೆ ಎಂದು ಹೇಳಬಹುದು. ಜನಪದ ಸಾಹಿತ್ಯವು ಆದಿಮಾನವನಿಂದಲೆ ರಚನೆಗೊಂಡಿರುವುದರಿಂದ ಅದೆ ನಮ್ಮ ಕನ್ನಡ ಸಾಹಿತ್ಯದ ಮೂಲ ಎಂದು ಗುರುತಿಸಲಾಗುತ್ತದೆ. ಇಲ್ಲಿರತಕ್ಕಂತಹ ಜನಪದ ಕಥನಗಳಲ್ಲಿಯೆ ದಲಿತರ ಕುರಿತಾದ ಚಿತ್ರಣ, ಜನಪದರು ದಲಿತ ಲೋಕಕ್ಕೆ ಸ್ಪಂದಿಸಿ ತಮ್ಮ ಪ್ರತಿಕ್ರಿಯೆಗಳನ್ನು ಜನಪದ ಕಥನಗಳಲ್ಲಿ ಹೇಳುತ್ತಾ ಬಂದಿರುತ್ತಾರೆ.

ಜನಪದ ಕಥನಗಳಲ್ಲಿ ಆದಿಮಾನವ ತಮ್ಮ ನೋವು, ನಲಿವು ದುಃಖ, ದುಮ್ಮಾನಗಳನ್ನು ಅಭಿವ್ಯಕ್ತಿಸಿಕೊಳ್ಳಲು ಕಥೆಗಳ ರೂಪದಲ್ಲಿ ಹೇಳುತ್ತಾ ಬಂದಿರುವ ಅನುಭವಾತ್ಮಕ ನಿರೂಪಣೆಗಳೇ ಕಥನಗಳಾಗಿ ಸೃಷ್ಟಿಗೊಂಡವು. ಇಂತಹವುಗಳಲ್ಲಿ ಹಲವಾರು ತೆರನಾಗಿರತಕ್ಕಂತಹ ದಲಿತ ಜೀವನ ಕಂಡುಬರುತ್ತದೆ. ಮೇಲ್ಜಾತಿಯ ಪುರುಷ ದಲಿತ ಮಹಿಳೆಯನ್ನು ತನ್ನ ಲೈಂಗಿಕ ಬಯಕೆಯನ್ನು ತೀರಿಸಿಕೊಳ್ಳಲು ಬಳಸಿಕೊಳ್ಳುವುದು ಇನ್ನು ದಲಿತ ಪುರುಷನ ಸೌಂದರ್ಯಕ್ಕೆ ಮರುಳಾಗಿ ಮೇಲ್ಜಾತಿಯ ಮಹಿಳೆಯರು ಅವನ ಜೊತೆ ಆಚೆ ಹೋಗಿ ಬದುಕುವುದು ಅವುಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಇಂತಹ ಘಟನೆಗಳು ಅವರಿಗೆ ಆಶ್ಚರ್ಯವಾಗಿ ಕಂಡುಬರುವುದರಿಂದ ಅವರು ಕಥೆಗಳನ್ನು ಮಾಡಿಕೊಂಡಿರುತ್ತಾರೆ. ಹೀಗೆ ದಲಿತರ ಕುರಿತಾದ ನೋವು ನಲಿವುಗಳನ್ನು ಜನಪದ ಕಥನಗಳಲ್ಲಿ ಗುರುತಿಸಲಾಗುತ್ತದೆ.

ಇನ್ನು ಶಿಷ್ಟಸಾಹಿತ್ಯದಲ್ಲಿ ನಾವು ಕಥನಗಳನ್ನು ಕಾಣುವುದು ೧೯ನೆಯ ಶತಮಾನದಲ್ಲಿ ಅದು ಪಾಶ್ಚಾತ್ಯರ ಪ್ರಭಾವದಿಂದ. ಇದಕ್ಕಿಂತ ಮುಂಚಿತವಾಗಿ ಎಂದರೆ ಕಥನಗಳು ಇರದೆ ಇದ್ದರೂ ಅದರ ಸ್ವರೂಪ ಅಲ್ಲಿರುವುದು ಕಂಡುಬರುತ್ತದೆ. ಅವು ಕಾವ್ಯದ ರೂಪದಲ್ಲಿರುತ್ತವೆ ಆದರೆ ಮುಕ್ತವಾಗಿ ಅವು ಕಥನಗಳನ್ನು ಹೊಂದಿರುತ್ತವೆ. ಅದಕ್ಕಾಗಿ ಪಂಪನ ಪಂಪಭಾರತ ಮತ್ತು ರನ್ನನ ಗಧಾಯುದ್ಧ ಇವುಗಳನ್ನು ಕಥನಗಳಿಗೆ ಹೋಲಿಕೆ ಮಾಡಿಕೊಂಡು ಇವುಗಳಲ್ಲಿ ಮೂಡಿ ಬಂದ ದಲಿತ ಲೋಕವನ್ನು ಇಲ್ಲಿ ಗುರುತಿಸಲಾಗುತ್ತದೆ. ಈ ಎರಡು ಕಾವ್ಯಗಳಲ್ಲಿ ಬರುವ ಕರ್ಣನ ಪಾತ್ರವನ್ನು ನೋಡಬಹುದು. ಕರ್ಣ ಶೂದ್ರನಾಗಿರುವುದರಿಂದ ಅವನು ಅಲ್ಲಿ ಹಲವಾರು ವಿಧದಲ್ಲಿ ಶೋಷಣೆಗೆ ಒಳಗಾಗುವನು. ಇಲ್ಲಿಂದಲೆ ನಾವು ದಲಿತ ಲೋಕವನ್ನು ನಮ್ಮ ಕನ್ನಡ ಸಾಹಿತ್ಯದಲ್ಲಿ ಗುರುತಿಸುತ್ತಾ ಬರುತ್ತೇವೆ.

ನಂತರ ಹರಿಹರನ ಬಸವರಾಜ ದೇವರ ರಗಳೆಯಲ್ಲಿ ಬಸವಣ್ಣನವರು ಜಾತಿವಿನಾಶದ ಕುರಿತು ಮಾಡಿದ ಕಲ್ಯಾಣಕ್ರಾಂತಿಯ ದಲಿತ ಬದುಕನ್ನು ಪ್ರತಿಬಿಂಬಿಸುತ್ತದೆ. ಅಂದಿನಿಂದಲೆ ನಮ್ಮ ಕನ್ನಡ ಸಾಹಿತ್ಯದಲ್ಲಿ ದಲಿತ ಪರ ಚಿಂತನೆ ದಲಿತ ಪರ ಕಾಳಜಿಗಳನ್ನು ಗುರುತಿಸಬಹುದು.

ನಂತರ ನಾವು ಕನ್ನಡ ಕಥನಗಳನ್ನು ಸ್ಪಷ್ಟವಾಗಿ ಕಾಣುವುದು ಆಧುನಿಕ ಕನ್ನಡ ಸಾಹಿತ್ಯದ ಮೊದಲ ಘಟ್ಟವಾದ ನವೋದಯದ ಘಟ್ಟದಿಂದಲೆ ಎಂದು ಹೇಳಬಹುದು. ಈ ಅವಧಿಯಲ್ಲಿ ಕಥನ ಪ್ರಕಾರದಲ್ಲಿಯೆ ಹಲವಾರು

ಕಥನಕಾರರು ತಮ್ಮ ಕಥನಗಳನ್ನು ರಚನೆ ಮಾಡಿದರು. ಇವರ ಕಥನಗಳೇ ದಲಿತ ಲೋಕವನ್ನು ಸ್ಪಷ್ಟವಾಗಿ ಗುರುತಿಸಲು ಅನುಕೂಲವಾಗುತ್ತದೆ. ಈ ಕಥನಗಳಲ್ಲಿ ದಲಿತ ಕುರಿತಾದ ಸಂವೇದನೆಯನ್ನು ನೋಡಲು ಆಧುನಿಕ ಕನ್ನಡ ಸಾಹಿತ್ಯದ ಸಾಹಿತ್ಯ ಘಟ್ಟಗಳನ್ನು ಗುರುತಿಸಿಕೊಂಡು ಅವುಗಳ ನೆಲೆಯಿಂದಲೆ ಅದನ್ನು ಅಧ್ಯಯನ ಮಾಡುತ್ತಾ ಬರಲಾಗಿದೆ.

**ನವೋದಯ**

ಹತ್ತೊಂಬತ್ತನೆಯ ಕೊನೆಯ ಮತ್ತು ಇಪ್ಪತ್ತನೆಯ ಶತಮಾನದ ಪ್ರಾರಂಭದ ಕಾಲ ದಲಿತರ ಒಂದು ಸಂದಿಗ್ಧವಾದ ಕಾಲವೆಂದು ಹೇಳಬಹುದು. ಭಾರತದಲ್ಲಿ ಅಸ್ಪೃಶ್ಯತೆ ಎನ್ನುವುದು ಹೀನವಾದವರು ಅವರು ದಲಿತ ಜನಾಂಗದವರು ಎಂಬ ಕಾರಣಕ್ಕೆ ಅವರನ್ನು ತುಂಬಾ ಕೀಳಾಗಿ ಕಾಣಲಾಗುತ್ತಿತ್ತು. ಅವರಿಗೆ ಸಮಾಜದಲ್ಲಿ ಯಾವ ಸ್ಥಾನಮಾನವು ಇರಲಿಲ್ಲ. ಪರಂಪರೆಯಿಂದ ಅವರನ್ನು ಅದೇ ತೆರನಾಗಿ ನೋಡಿಕೊಂಡು ಬರಲಾಗುತ್ತಿತ್ತು. ಇಂತಹ ಒಂದು ದುಸ್ಥಿತಿಯಲ್ಲಿ ಬ್ರಿಟಿಷರ ಆಗಮನ ನಮ್ಮ ದೇಶಕ್ಕೆ ಆಯಿತು ಎಂದು ಹೇಳಬಹುದು. ಅವರ ವಸಹಾತುಷಾಯಿಯ ಪ್ರಭಾವ ಪ್ರೇರಣೆಯಿಂದ ಕ್ರೈಸ್ತಮಿಶನರಿಗಳು ಇಲ್ಲಿ ಹುಟ್ಟಿಕೊಂಡವು. ಇಲ್ಲಿ ದಲಿತರನ್ನು ಕಾಣಲಾಗುವ ರೀತಿಯನ್ನು ಅರಿತುಕೊಂಡು ಅವರಿಗೆ ತಮ್ಮ ಪ್ರೀತಿ ವಿಶ್ವಾಸಗಳನ್ನು ತೋರಿಸುವ ನೆಪದಲ್ಲಿ ಅವರನ್ನು ತಮ್ಮ ಧರ್ಮಕ್ಕೆ ಮತಾಂತರ ಮಾಡಿಕೊಳ್ಳುವ ಕಾರ್ಯದಲ್ಲಿ ತೊಡಗಿದರು. ಹೀಗೆ ಮೊದಲು ಹಿಂದೂಧರ್ಮದ ಶೋಷಣೆಗೆ ಮಾತ್ರ ಒಳಗಾದ ದಲಿತರು ಇಲ್ಲಿ ಕ್ರೈಸ್ತ ಧರ್ಮದ ಶೋಷಣೆಗೂ ಒಳಗಾದರು. ಕ್ರೈಸ್ತರು ಮತ್ತು ಹಿಂದೂ ಈ ಎರಡು ಧರ್ಮಗಳಿಂದಲೂ ಅವರು ಆರ್ಥಿಕವಾಗಿಯಾಗಲಿ, ಸಾಮಾಜಿಕವಾಗಿಯಾಗಲಿ, ಬೌದ್ಧಿಕವಾಗಿಯಾಗಲಿ ಮೇಲೆ ಬರಲು ಸಾಧ್ಯವಾಗಲಿಲ್ಲ. ನಂತರ ಅಂಬೇಡ್ಕರ್, ಗಾಂಧಿ ಮುಂತಾದ ಸಮಾಜ ಸುಧಾರಕರ ಹೋರಾಟ ಮತ್ತು ಪರಿಶ್ರಮದಿಂದ ಸ್ವಲ್ಪಮಟ್ಟಿಗೆ ಸಮಾನತೆಯನ್ನು ನಂತರ ಪಡೆದುಕೊಂಡರು.

ಇಂತಹ ಅವಧಿಯಲ್ಲಿ ಹುಟ್ಟಿಕೊಂಡ ಸಾಹಿತ್ಯ ತನ್ನ ಪ್ರಸ್ತುತ ಸಾಮಾಜಿಕ ಸ್ಥಿತಿಗತಿಯನ್ನು ಒಳಗೊಂಡಿತ್ತು. ನವೋದಯದ ಅವಧಿಯಲ್ಲಿ ಕಂಡುಬರುವ ಕಥನಕಾರರ ಕಥನಗಳಲ್ಲಿ ದಲಿತರ ಕುರಿತಾದ ಚಿತ್ರಣ, ಅವರ ಬದುಕು, ಮೇಲೆ ಹೇಳಿದ ಹಾಗೆ ಕಂಡುಬರುತ್ತದೆ.

**ಮಾಸ್ತಿ ವೆಂಕಟೇಶ ಅಯ್ಯಂಗಾರ**

ಇವರು ತಮ್ಮ ಕಾಲಘಟ್ಟದ ದಲಿತರ ಪರಿಸ್ಥಿತಿಗನುಗುಣವಾಗಿ ತಮ್ಮ ಕಥನಗಳಲ್ಲಿ ಅವರ ಜಗತ್ತನ್ನು ಅನಾವರಣ ಮಾಡಿದ್ದಾರೆ. ಅವರು ಹಲವಾರು ಕಥನಗಳನ್ನು ಈ ಸಂದರ್ಭದಲ್ಲಿ ಬರೆದರು. ಅವರ ಕಥನಗಳು ಭಾರತೀಯ ಬದುಕಿನ ಹಿಂದಿರುವ ಸ್ಥಾಯಿ ಕೇಂದ್ರವಾಗಿ ಆ ಸಮಾಜದ ಪ್ರತಿಬಿಂಬಗಳಾಗಿವೆ. ಮೇಲುನೋಟಕ್ಕೆ ಸಂಪ್ರದಾಯಶರಣರಂತೆ ಕಾಣಿಸುತ್ತಿದ್ದ ಮಾಸ್ತಿ ಆಳದಲ್ಲಿ ಅಪಾರ ಮಾನವೀಯ ಅಂತಃಕರಣ ತುಳಿಕಿಸಿದರು.... ಸಾಂಪ್ರದಾಯಿಕ ಮೌಲ್ಯಗಳನ್ನೊಪ್ಪಿಕೊಂಡ ಅವರ ಮನಸ್ಸು ಎಲ್ಲರಿಗೂ ಒಳ್ಳೆಯದನ್ನು ಬಯಸುವ ಪ್ರಜ್ಞಾಪೂರ್ವಕ ಧೋರಣೆಯನ್ನು ಅನುಸರಿಸುತ್ತಿತ್ತು. ಅದಕ್ಕಿಂತ ಹೆಚ್ಚಾಗಿ ಮಾಸ್ತಿಯವರ ಜೀವನಾನುಭವದಲ್ಲಿನ ಬಾಲ್ಯದ ಪರಿಸರ, ಬಡತನ, ನೋವು, ನಲಿವು ಹಾಗೂ ಆಡಳಿತಾನುಭವ ಸಂಚಾರದಲ್ಲಿ ಕಂಡ ಭಾರತೀಯ ವಿವಿಧ ಸ್ತರದ ಜನಗಳ ಕಷ್ಟ, ಕಾರ್ಪಣ್ಯ, ರೀತಿನೀತಿಗಳು ಮುಂತಾದವುಗಳ ಪರಿಚಯ ಮಾಸ್ತಿಯವರ ಸೃಜನಶೀಲ ಜಗತ್ತು ಅನಾವರಣಗೊಳಿಸುತ್ತದೆ.

ಹಿಂದೂಧರ್ಮ ಸನಾತನ ಸಂಸ್ಕೃತಿಯ ಶ್ರೇಣೀಕೃತ ಸಮಾಜದಲ್ಲಿ ಕೆಳಜಾತಿಗಳು ಮತ್ತು ದಲಿತ ಜಾತಿಗಳನ್ನು ಅಸಮಾನತೆಯಿಂದಾಗಿ ಪ್ರಾಣಿ ಪಕ್ಷಿಗಳಂತೆ ಕೀಳು ಭಾವನೆಗಳಿಂದ ದೂರ ಇಡಲಾಗುತ್ತಿತ್ತು. ಅದರಲ್ಲಿ ಯಾವುದೇ ತರಹ ಮನುಷ್ಯತ್ವದ ನೆಲೆಗಳೇ ಇಲ್ಲವಾಗಿದ್ದವು. ಆದರೆ ಮಾಸ್ತಿ ಅಂತಹ ಸನಾತನ ಧರ್ಮಸ್ಮೃತಿಗಳಿಂದ ಬಂದರೂ

ಆ ಜನಗಳ ಬಗ್ಗೆ ಅಪಾರವಾದ ಪ್ರೀತಿ, ವಿಶ್ವಾಸ, ನಂಬಿಕೆ, ದಯೆ, ಕರುಣೆ, ಸಹಾನುಭೂತಿ ಮಾನವೀಯತೆ ಮುಂತಾದ ಸದ್ಗುಣಗಳನ್ನು ಕಥೆಗಳಲ್ಲಿ ನಿರೂಪಿಸಿ ತೋರಿಸಿದ್ದಾರೆ. ಇದು ಮಾಸ್ತಿಯವರ ಉದಾರವಾದ ನಿಲುವುಗಳಿಗೆ ಸಾಕ್ಷಿಯಾಗಿದೆ. ಈ ಹಿನ್ನೆಲೆಯಲ್ಲಿ ಮಾಸ್ತಿಯವರ ದಲಿತ ಜೀವನವನ್ನೊಳಗೊಂಡ ಅವರ ಜೀವನಕ್ಕೆ ಸ್ಪಂದಿಸಿ ತಮ್ಮ ಸ್ಪಂದನೆಗಳನ್ನು 'ಕಲ್ಮಾಡಿಯ ಕೋಣ' ಮತ್ತು 'ಇದೇ ತೀರ್ಪು' ಮುಂತಾದ ಕಥನಗಳಲ್ಲಿ ನೋಡಬಹುದು.

ನಮ್ಮ ಹಿಂದೂಧರ್ಮದಲ್ಲಿ ಮಾರಿಹಬ್ಬ ಆಚರಣೆಯು ವಿಶಿಷ್ಟವಾದುದು. ಇದನ್ನು ದಲಿತರ ಹಬ್ಬವೆಂದೆ ಕರೆಯಲಾಗುತ್ತದೆ. ಯಾಕೆಂದರೆ ಮಾರಿ, ಕಾಳಿ, ಮಾಳಿ, ದುರ್ಗಿ ಎನ್ನುವಂತಹ ಕ್ಷುದ್ರದೇವತೆಗಳು ದಲಿತರಿಗೆ ಮೀಸಲು. ಇವುಗಳ ಪೂಜೆ, ಪುನಸ್ಕಾರಗಳನ್ನು ಮೇಲ್ಜಾತಿಯ ಜನ ಅಷ್ಟಾಗಿ ಮಾಡುವುದಿಲ್ಲ. ಮಾಡಿದರೆ ಅವರು ಅಪವಿತ್ರವಾಗುತ್ತಾರೆ. ಅವರು ಏನಿದ್ದರೂ ಶ್ರೀಮಂತ ದೇವರುಗಳಾದ ತಿರುಪತಿ, ಹೊರನಾಡ ಅನ್ನಪೂರ್ಣೇಶ್ವರಿ ಇಂತಹ ದೇವರನ್ನು ಅವರು ಹಚ್ಚಿಕೊಂಡಿರುತ್ತಾರೆ. ಯಾಕೆಂದರೆ ಇಂತಹ ದೇವರುಗಳಿಗಿಂದ ಹಣ ಐಶ್ವರ್ಯವು ಹೆಚ್ಚು ಪ್ರಮಾಣದಲ್ಲಿ ಬರುತ್ತದೆ. ಆದರೆ ಕ್ಷುದ್ರದೇವತೆಗಳಿಂದ ಹಣ ಐಶ್ವರ್ಯ ಸಿಗುವುದಿಲ್ಲ ಎಂಬ ಕಾರಣದಿಂದ ದೇವರ ಪೂಜೆ, ಪುನಸ್ಕಾರದಲ್ಲಿಯೂ ಅಸಮಾನತೆ, ತಾರತಮ್ಯತೆಯನ್ನು ನಮ್ಮ ಸಮಾಜದಲ್ಲಿ ಕಾಣಲಾಗುತ್ತಿತ್ತು. ಅದಕ್ಕಾಗಿ ಇದು ದಲಿತರಿಗೆ ಮಾತ್ರ ಸೀಮಿತ. ಇದರಲ್ಲಿಯೂ ಅವರ ಹಬ್ಬದಲ್ಲಿಯೂ ಸಹಿತ ಅವರನ್ನು ತಮ್ಮ ಪಾಡಿಗೆ ಬಿಡದೆ ಅಲ್ಲಿಯೂ ಅವರನ್ನು ಶೋಷಣೆ ಮಾಡಲಾಗುತ್ತಿತ್ತು. ಇಂತಹ ಒಂದು ಸನ್ನಿವೇಶವನ್ನು 'ಕಲ್ಮಾಡಿಯ ಕೋಣ' ಕಥೆಯು ಅನಾವರಣ ಮಾಡುತ್ತದೆ.

ದಲಿತ ಜನಾಂಗದ ವಿಶಿಷ್ಟ ಆಚರಣೆಯಲ್ಲಿ ಮಾರಿಗೆ ಕೋಣವನ್ನು ಬಲಿಕೊಡುವುದು ಒಂದು ಪದ್ಧತಿ. ಇಲ್ಲಿ ಬಲಿಯಾಗುವ ಕೋಣ ಊರಿನ ಪಾಪದ ಫಲವಾಗಿದ್ದು, ದಲಿತರು ಹುಟ್ಟಿದ ತಪ್ಪಿಗಾಗಿ ಕೋಣದ ರೂಪದಲ್ಲಿ ಸೇಡು ತೀರಿಸಿಕೊಳ್ಳುವ ಸಂಪ್ರದಾಯವಾಗಿದೆ. ಇದನ್ನು ಆಚರಿಸದೆ ಹೋದರೆ ಊರಿನಲ್ಲಿ ಹಲವಾರು ಹಾನಿಗಳು ಆಗುತ್ತವೆ. ಇತ್ಯಾದಿ ಸುಳ್ಳು ನಂಬಿಕೆಗಳಿಂದ ದಲಿತರನ್ನು ಶೋಷಣೆ ಮಾಡಲಾಗುತ್ತದೆ. ಇಲ್ಲಿ ಬಲಿಯಾಗುವ ಕೋಣ ದಲಿತರ ಕೋಣವಾಗಿರುತ್ತದೆ. ಆ ದಲಿತರು ಕೋಣವನ್ನು ಬಲಿಕೊಡಲು ಒಪ್ಪದಿದ್ದರೆ ಅವರನ್ನು ಶಿಕ್ಷೆಗೆ ಒಳಪಡಿಸುವುದು ಸಾಮಾನ್ಯವಾಗಿರುತ್ತದೆ. ಈ ಕಥೆಯಲ್ಲಿ ಇಂತಹ ಸನ್ನಿವೇಶವೂ ಬರುತ್ತದೆ. ದಲಿತರ 'ಸುಬ್ಬ' ಈ ಆಚರಣೆಗೆ ತನ್ನ ಕೋಣವನ್ನು ಬಲಿಕೊಡುವ ಸರದಿ ಬಂದಿರುತ್ತದೆ. ಆದರೆ ಅವನ ಜೀವನಕ್ಕೆ ಆಧಾರವಾದ ಅದರಿಂದಲೆ ಅವರ ಬದುಕು ಸಾಗುವುದರಿಂದ ಅದನ್ನು ಬಲಿಕೊಡಲು ಸುಬ್ಬ ಒಪ್ಪುವುದಿಲ್ಲ. ಆದರೆ ಊರಿನ ಹಿರಿಯರು ಅವನಿಗೆ ಕೋಣ ಬಲಿಕೊಡಲು ಒತ್ತಾಯ ಮಾಡುತ್ತಾರೆ. ಆದರೆ ಸುಬ್ಬನ ಮನಸ್ಸು ಒಪ್ಪುವುದಿಲ್ಲ. ಅದರಿಂದ ತನ್ನ ಸಂಸಾರವೆ ಬೀದಿಗೆ ಬರುತ್ತದೆಂಬ ಭಯ ಅವನಿಗೆ ಕಾಡುತ್ತದೆ. ಸುಬ್ಬನ ಅಸಹಾಯಕತೆಯನ್ನು ಅರ್ಥಮಾಡಿಕೊಂಡ ನಿರೂಪಕನಿಗೆ ಆತನ ಬಗ್ಗೆ ಸಹಾನುಭೂತಿ ಕನಿಕರವಿದೆ. ಆದರೆ ಇದಕ್ಕೆ ಕಾರಣವಾದ ವ್ಯವಸ್ಥೆಯ ಬಗ್ಗೆ ವ್ಯಂಗ್ಯ ವಿಡಂಬನೆಯನ್ನಷ್ಟೇ ಮಾಡುತ್ತಾನೆ. ಪ್ರಶ್ನೆ ಮಾಡುವ ಗೋಜಿಗೆ ಹೋಗುವುದಿಲ್ಲ. ಇದು ಕಥೆಗಾರನ ಮಿತಿಯೂ ಆಗಿದೆ.

ಸುಬ್ಬ ತನ್ನ ಬದುಕಿನ ನಿರ್ಧಾರದಲ್ಲಿ ವ್ಯವಸ್ಥೆಯ ಭಾಗವಾದ ಊರಿನ ಗೌಡರ ಹತ್ತಿರ ತನ್ನ ಅಳಲನ್ನು ತೋಡಿಕೊಂಡು ಪರ್ಯಾಯ ವ್ಯವಸ್ಥೆಗೆ ಕೋರಿಕೆ ಸಲ್ಲಿಸುತ್ತಾನೆ. ದಲಿತನೊಬ್ಬ ಊರಿನ ವ್ಯವಸ್ಥೆಯ ವಿರುದ್ಧ ನಿಲುವು ಸೂಚಿಸುವುದೆಂದರೇನು ಹುಡುಗಾಟವೇ? ಆದರೆ ಮಾಸ್ತಿಯ ಕಥೆಯಲ್ಲಿ ದಲಿತರು ಮುಕ್ತವಾಗಿ ಮಾತನಾಡಲು ಅವಕಾಶವಿದೆ. ಇಲ್ಲಿನ ನಿರೂಪಕನ ನಿಲುವು ಅಂತಹದ್ದು. ಸುಬ್ಬನ ಕೋರಿಕೆಯನ್ನು ಊರಿನ ಗೌಡ ನಿರಾಕರಿಸುತ್ತಾನೆ. ಎಷ್ಟೇ ಆದರೂ ಆತನು ವ್ಯವಸ್ಥೆಯ ಯಜಮಾನ, ಶೂದ್ರ, ಧಾರ್ಮಿಕ ವಿಚಾರದಲ್ಲಿ ಆತನ ಬುದ್ಧಿವಂತಿಕೆ ಅಷ್ಟಕಷ್ಟೆ. ಆದ್ದರಿಂದ ಸುಬ್ಬನ ಕೋರಿಕೆಯನ್ನು ಗೌಡ ಊರಿನ ಜೋಯಿಸರ ಗಮನಕ್ಕೆ

ತರುತ್ತಾನೆ. ಗೌಡನಿಗೆ ವ್ಯವಸ್ಥೆಯನ್ನು ಆಳುವುದಕ್ಕಷ್ಟೇ ಗೊತ್ತು. ಅದನ್ನು ತಿದ್ದುಪಡಿ ಮಾಡುವುದು ತಿಳಿಯದು. ಅದೇನಿದ್ದರೂ ಇನ್ನೊಂದು ವ್ಯವಸ್ಥೆಯ ಭಾಗವಾದ ಪುರೋಹಿತರ ಬುದ್ಧಿವಂತಿಕೆಯ ಕುತಂತ್ರಗಳಿಗೆ ಮಾತ್ರ ಸಂಬಂಧಪಟ್ಟ ವಿಚಾರ. ಸುಬ್ಬನ ಕೋರಿಕೆಯ ಬಗ್ಗೆ ಜೋಯಿಸರು ತಮ್ಮ ಪುರೋಹಿತಶಾಸ್ತ್ರ ಬಲದ ಒಂದು ಪುರಾಣವನ್ನೇ ಮಂಡಿಸುತ್ತಾರೆ. ಇಲ್ಲಿ ಕಥೆಗಾರನ ನಿಷ್ಪಕ್ಷಪಾತ ಗುಣಕ್ಕೆ ಸಾಕ್ಷಿಯೆಂಬಂತೆ ಜೋಯಿಸರ ತಂತ್ರದ ಚಿತ್ರಣವನ್ನು ಗಮನಿಸಬಹುದಾಗಿದೆ.

ಜೋಯಿಸರ ಪುರಾಣದ ಓದಿನಲ್ಲಿ ಮಾಸ್ತಿಯವರ ಧಾರ್ಮಿಕ ಶ್ರದ್ಧೆ, ದೇವರು ಧರ್ಮದ ಹೆಸರಿನಲ್ಲಿ ಜನರನ್ನು ನಂಬಿಸಿ ಅವರಲ್ಲಿ ಭಯ, ಭಕ್ತಿ, ಮೌಢ್ಯ, ಅಜ್ಞಾನ, ಕುರುಡು ನಂಬಿಕೆಗಳನ್ನು ತುಂಬಿ ವಂಚಿಸುವ ಹುನ್ನಾರುಗಳನ್ನು ಒಪ್ಪುವುದಿಲ್ಲ. ಅದರ ಬಗ್ಗೆ ಅವರ ಜೀವಪರ ನಿಲುವು ಎಚ್ಚರವಾಗಿದ್ದು ಅದನ್ನು ನಿರಾಕರಿಸುತ್ತದೆ. ನಿಜವಾದ ಧಾರ್ಮಿಕತನವಷ್ಟೇ ಒಪ್ಪುತ್ತಾ ಹೋಗುತ್ತದೆ. ಅದನ್ನು ಇಲ್ಲಿ ಜೋಯಿಸರ ನಿಲುವು ಎಚ್ಚರವಾಗಿದ್ದು ಅದನ್ನು ನಿರಾಕರಿಸುತ್ತದೆ. ನಿಜವಾದ ಧಾರ್ಮಿಕತನವಷ್ಟೇ ಒಪ್ಪುತ್ತಾ ಹೋಗುತ್ತದೆ. ಅದನ್ನು ಇಲ್ಲಿ ಜೋಯಿಸರ ಕಟ್ಟುಕಥೆಯ ಹಿಂದಿರುವ ಮರ್ಮವನ್ನು ಕಥೆಗಾರನ ವ್ಯಂಗ್ಯದ ದಾಟಿಯಲ್ಲಿ ಅರಿಯಬಹುದಾಗಿದೆ. ತಮ್ಮ ದೇವರ ಕೋರ್ಟಿನಲ್ಲಿ ಜೋಯಿಸರು ಅಂತಿಮ ತೀರ್ಪು ಕೊಟ್ಟ ಮೇಲೆ 'ಸುಬ್ಬ' ಮಾಡುವುದೇನು? ಅವನು ವ್ಯವಸ್ಥೆಯಲ್ಲಿ ಕುರುಡು ನಂಬಿಕೆಯ ಕೂಸಾದ್ದರಿಂದ ಅದನ್ನು ಗ್ರಹಚಾರಕ್ಕೆ ಹೋಲಿಸಿ ಒಪ್ಪಿಕೊಂಡು, ವಿಧಿ ಇಲ್ಲದೇ ತನ್ನ ಕೋಣವನ್ನು ಕತ್ತರಿಸಲು ಒಪ್ಪಿಕೊಳ್ಳುತ್ತಾನೆ. ದಲಿತ ಸುಬ್ಬ ಮತ್ತು ಆತನ ಹೆಂಡತಿಗೆ ಕೋಣ ಬರೀ ಕೋಣವಾಗಿರಲಿಲ್ಲ, ಅವರ ಬದುಕಿನ ಭಾಗವಾಗಿತ್ತು. ತಮ್ಮ ಕರುಳುಬಳ್ಳಿಯಂತೆ ಸಾಕಿಸಲುಹಿದ ತಂದೆ ತಾಯಿಗಳಾಗಿದ್ದರು. ಅಂತಹವರಿಗೆ ತಮ್ಮ ಕೋಣವನ್ನು ಬಲಿಕೊಡಬೇಕಾದರೆ ದುಃಖವಾಗದೇ ಇರುತ್ತದೆಯೇ?

ದಲಿತ ಸುಬ್ಬನ ಈ ಅನ್ಯಾಯವನ್ನು ಕೇಳುವವರು ಯಾರು ಇರುವುದಿಲ್ಲ. ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಇಂತಹ ಅನ್ಯಾಯಗಳು ಅವು ಎಷ್ಟು ನಡೆಯುತ್ತದೆಯೋ ಯಾರಿಗೆ ಗೊತ್ತು. ಇಂತಹ ಒಂದು ಕರುಣಾಮಯವಾದಂತಹ ದೃಶ್ಯವನ್ನು ಮಾಸ್ತಿಯವರು ಚಿತ್ರಣ ಮಾಡುತ್ತಾರೆ.

ಹಿಂದೂಧರ್ಮ ಪರಂಪರೆಯಿಂದಲೂ ದಲಿತರನ್ನು ಮತಾಂತರಗೊಳಿಸಲು ಕ್ರೈಸ್ತಮಿಷನರಿಗಳು ಮಾಡುತ್ತಿದ್ದ ಪರಿವರ್ತನೆಯನ್ನು ಮಾಸ್ತಿಯವರು 'ಇಲ್ಲಿಯ ತೀರ್ಪು' ಕಥೆಯಲ್ಲಿ ಚಿತ್ರಿಸಿದ್ದಾರೆ. ವಸಹಾತುಶಾಹಿ ಸಂದರ್ಭದಲ್ಲಿ ಇಂತಹ ಒಂದು ಬ್ರಿಟಿಷರ ಕಾರ್ಯ ನಡೆಯುತ್ತಿತ್ತು. ಅಂದಿನ ಭಾರತದ ಶ್ರೇಣೀಕೃತ ಸಮಾಜ ವ್ಯವಸ್ಥೆಯು ಧಾರ್ಮಿಕ, ಸಾಮಾಜಿಕ, ಆರ್ಥಿಕ ಅಸಮಾನತೆಗಳ ಆಗರವಾಗಿದ್ದು ಹಿಂದೂಧರ್ಮ ಪರಂಪರೆಯಲ್ಲಿ ಹಿಂದುಗಳೇ ಆದ ದಲಿತರನ್ನು, ಮಹಿಳೆಯರನ್ನು ಕೀಳಾಗಿ ನೋಡಲಾಗುತ್ತಿತ್ತು. ಅದರಲ್ಲೂ ದಲಿತರನ್ನು ನೀಚರು, ದುಷ್ಟರು, ಪಾಪದವರು, ಕಳ್ಳರು, ರಾಕ್ಷಸರು ಮುಂತಾದ ವಿಶೇಷಣಗಳಿಂದ ಪರಿಗಣಿಸಿ ಅಸ್ಪೃಶ್ಯರನ್ನಾಗಿ ಮಾಡಿ ಅವರ ಬದುಕನ್ನು ಹಿಂದೂಧರ್ಮದಿಂದ ಪ್ರತ್ಯೇಕವಾಗಿಯೇ ಇಡಲಾಗಿತ್ತು. ಇಂತಹ ಸಂದರ್ಭದಲ್ಲಿ ದಲಿತರ ಪರಿಸ್ಥಿತಿಯನ್ನು ಅರಿತುಕೊಂಡ ಮಿಶನರಿಗಳು ಅವರನ್ನು ಪ್ರೀತಿ, ಕರುಣೆ ತೋರಿಸುವ ನೆಪದಲ್ಲಿ ತಮ್ಮ ಧರ್ಮಕ್ಕೆ ಮತಾಂತರಮಾಡಿಸಿಕೊಳ್ಳುವ ಹೊಂಚು ಹಾಕುತ್ತಿದ್ದರು. ಇಂತಹ ನೂರಾರು ಅನುಭವಗಳ ಹಿನ್ನೆಲೆಯಲ್ಲಿ ಅಂತಹ ಒಂದು ಘಟನೆಯ ಒಳನೋಟವೊಂದನ್ನು ಈ ಕಥೆ ಕಟ್ಟಿಕೊಡುತ್ತದೆ. ಪರೋಕ್ಷವಾಗಿ ಹಿಂದೂಧರ್ಮ ಪರಂಪರೆಯ ಸಮರ್ಥನೆಯ ಪ್ರಯತ್ನ ಮಾಡುತ್ತದೆ. ಈ ಕಥೆಯಲ್ಲಿ ಆರ್ಥರ್ ಹೆನ್ರಿ ಸಾಹೇಬರು ಮತ್ತು ಒಡ್ಡರ ತಿಮ್ಮಾಬೋಯಿ, ರಾಮಾಬೋಯಿ. ಇವರು ಅಪರಾಧಿಗಳು. ಇವರ ಅಪರಾಧ ಕುರಿತು ತೀರ್ಪು ಕೊಡುವುದಾಗಿದೆ. ಇದರಲ್ಲಿ ನಿಜವಾದ ಅಪರಾಧಿ ಎಂದರೆ ಹೆನ್ರಿ ಸಾಹೇಬರು. ಆದರೆ ತಿಮ್ಮಾಬೋಯಿ ಮತ್ತು ರಾಮಾಬೋಯಿ ದಲಿತರೆಂಬ ಕಾರಣಕ್ಕೆ ಆ ತಪ್ಪು ಇವರ ಮೇಲೆ ಸವಾರಿ ಮಾಡುತ್ತದೆ. ಹೆನ್ರಿ ಸಾಹೇಬರು ಧರ್ಮಗುರುಗಳು ಆಗಿರುವುದರಿಂದ ಅವರಿಗೆ ಪಶ್ಚಾತಾಪವೆ ಶಿಕ್ಷೆ ಎಂದು ತೀರ್ಪು ಕೊಡಲಾಗುತ್ತದೆ. ಅವರು ನಿಜವಾದ ಅಪರಾಧಿಗಳು ಎಂದು ನ್ಯಾಯಾಧೀಶರಿಗೆ ಗೊತ್ತಿರುತ್ತದೆ. ಆದರೆ ಅವರಿಗೆ ಶಿಕ್ಷೆ ಕೊಡುವಲ್ಲಿ ಅವರು ಸಂಪ್ರದಾಯವಾದಿ ಆಗಿರುವುದರಿಂದ ಇಂತಹ ಕೆಲಸ ಅವರಿಗೆ ಮಾಡಲು ಸಾಧ್ಯವಾಗುವುದಿಲ್ಲ. ಇಲ್ಲಿ ಅವರ ಅಸಾಹಯಕತೆಯನ್ನು ಗುರುತಿಸಬಹುದು.

**ಕುವೆಂಪು**

ನವೋದಯದ ಕನ್ನಡ ಸಣ್ಣಕಥೆಗಾರರಲ್ಲಿ ಕುವೆಂಪು ಮೊದಲ ಶೂದ್ರವರ್ಗದ ಕಥೆಗಾರರು. ಕಥನ ಪ್ರಕಾರದಲ್ಲಿ ತಮ್ಮದೇ ಆದ ಅನುಭವಗಳನ್ನು ಕಟ್ಟಿಕೊಟ್ಟ ಮೊದಲ ಕಥೆಗಾರರಾಗಿ ಕಂಡುಬರುತ್ತಾರೆ.

ಹಿಂದೂಧರ್ಮದ ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ತಾರತಮ್ಯತೆಗೆ ಒಳಗಾಗಿ ಶೋಷಣೆಯನ್ನು ಅನುಭವಿಸಿದ ಕುವೆಂಪು ತಮ್ಮ ಕೃತಿಗಳಲ್ಲಿ ದಲಿತರ ಬದುಕಿನ ಹಿಂದಿನ ವೈದಿಕಶಾಹಿಯ ಕುತಂತ್ರವನ್ನು ಕಟುವಿಮರ್ಶೆಗೆ ಗುರಿಮಾಡುತ್ತಾರೆ. ಅವರ ಕಥನಗಳ ಅಭಿವ್ಯಕ್ತಿ ಸ್ವರೂಪವನ್ನು ನೋಡಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಇವರು ಕೆಲವೊಂದು ಸಂದರ್ಭದಲ್ಲಿ ಉದಾರವಾದಿಯಾಗಿ ಕಂಡುಬಂದರೂ ಸಹಿತ ಬ್ರಾಹ್ಮಣೇತರ ಚಳವಳಿಯ ದಟ್ಟವಾದ ಪ್ರಭಾವಕ್ಕೆ ಒಳಗಾಗಿರುವ ಸಾಧ್ಯತೆ ಕಂಡುಬರುತ್ತದೆ. ಇದರ ಹಿನ್ನೆಲೆಯಿಂದ ಅವರು ದಲಿತ ಸಂವೇದನಕಾರರಾಗಿದ್ದುದು ಕಂಡುಬರುತ್ತದೆ. ಇದರ ಪ್ರತೀಕವಾಗಿ ಸಾಲದ ಮಗು ಮತ್ತು ಯಾರು ಅರಿಯದ ವೀರ ಮಲೆಗಳಲ್ಲಿ ಮದುಮಗಳು ಮುಂತಾದ ಕಥನಗಳು ಕಂಡುಬರುತ್ತವೆ. ಈ ಕಥನಗಳು ಲೇಖಕರ ದಲಿತ ಸಂವೇದನೆಯನ್ನು ಪ್ರತಿಬಿಂಬಿಸುತ್ತವೆ.

ಶೂದ್ರವರ್ಗದ ಯಜಮಾನ ಸಂಸ್ಕೃತಿಯಿಂದ ದಲಿತ ವರ್ಗಗಳನ್ನು ತುಳಿಯಲ್ಪಟ್ಟ ಶೋಷಣೆ, ದಬ್ಬಾಳಿಕೆ, ದೌರ್ಜನ್ಯಗಳನ್ನು ಅವರು ತಮ್ಮ ಕಥನಗಳಲ್ಲಿ ಅನಾವರಣ ಮಾಡುತ್ತಾರೆ. ದಲಿತ ವರ್ಗದ ಬಗ್ಗೆ ಇರುವ ಸಹಾನುಭೂತಿ, ಕರುಣೆ, ಮಾನವೀಯತೆಗಳನ್ನು ಅಭಿವ್ಯಕ್ತಿಸಿದ್ದಾರೆ. ದಲಿತರ ಬದುಕಿನ ಮೇಲೆ ಬ್ರಾಹ್ಮಣರು ಶೂದ್ರರನ್ನು, ದಲಿತರನ್ನು ಶೋಷಣೆ ಮಾಡುವ ಪರಿ ಒಂದು ರೀತಿಯಾದರೆ ಶೂದ್ರವರ್ಗದವರೇ ದಲಿತರನ್ನು ಶೋಷಣೆ ಮಾಡುವ ಪರಿ ಇನ್ನೊಂದು ರೀತಿಯದಾಗಿರುತ್ತದೆ. ಅದರಲ್ಲಿಯೂ ಗೇಣಿದಾರರಾದ ದಲಿತರು ಸಾಗುವಳಿ ಮಾಡುತ್ತಾ ಬೆವರು ಸುರಿಸಿ ಅದರಿಂದ ಬಂದ ಪ್ರತಿಫಲದ ನಾಲ್ಕನೇ ಮೂರು ಪಾಲನ್ನು ಒಡೆಯನಿಗೆ ಅರ್ಪಿಸಿ ಮಿಕ್ಕ ಪಾಲನ್ನು ಬದುಕು ಜೀತಗಾರರಾಗಿ ಮಾರ್ಪಡುವ ದಲಿತರ ಬದುಕಿನ ಬವಣೆ ದುರಂತಮಯವಾದುದನ್ನು ಸಾಲದ ಮಗು ಎಂಬ ಕಥೆಯಲ್ಲಿರುವ ಸಂವೇದನೆ ಆಗಿರುವುದು ತಿಳಿಯುತ್ತದೆ.

ಊಳಿಗಮಾನ್ಯ ವ್ಯವಸ್ಥೆಯಲ್ಲಿ ಜೀತಪದ್ಧತಿ ಒಂದು ಕ್ರೂರವಾದ ವಿಧಾನ. ಇದರಡಿಯಲ್ಲಿ ಬದುಕನ್ನು ನಡೆಸಬೇಕಾಗುತ್ತದೆ ಎಂದು ಸಾಲದ ಮಗು ಮತ್ತು ಮಲೆಗಳಲ್ಲಿ ಮದುಮಗಳು ಎಂಬ ಕಥನಗಳಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಸಾಲದ ಮಗು ಎಂಬ ಕಥೆಯಲ್ಲಿ ಸುಬ್ಬ ಎಂಬ ಜೀತದ ಬಾಲಕನು ತನ್ನ ಒಡೆಯನಿಂದ ಶೋಷಣೆಗೆ ಒಳಗಾಗುತ್ತಾನೆ. ಬಾಲಕ ಎಂಬ ಅರಿವು ಇಲ್ಲದ ಒಡೆಯ ಅವನನ್ನು ರಾತ್ರಿ ವೇಳೆಯಲ್ಲಿಯೂ ದುಡಿಸಿಕೊಳ್ಳುತ್ತಾನೆ. ದಿನವಿಡೀ ಕೆಲಸ ಮಾಡಿ ರಾತ್ರಿ ಸಾಲದು ಎಂಬಂತೆ ಆ ವೇಳೆಯಲ್ಲಿ ಅವನನ್ನು ಮಳೆಬರುವ, ಗುಡುಗು ಮಿಂಚು ಆರ್ಭಟಿಸುವ ವೇಳೆಯಲ್ಲಿ ಹೊರಗಡೆ ಕೆಲಸಕ್ಕೆ ಕಳಿಸುತ್ತಾನೆ. ಆ ಮಳೆಯ ಆರ್ಭಟದಿಂದ ಮತ್ತು ಒಡೆಯನ ಬಾರಕೋಲು ಏಟಿನಿಂದ ನಲುಗಿ ಹೋದ ಸುಬ್ಬ ದಾರಿಯಲ್ಲಿ ಸರ್ಪದ ಬಾಯಿಗೆ ಸಿಕ್ಕು ಅಲ್ಲಿ ಬಿದ್ದು ಸಾಯುತ್ತಾನೆ. ಹೀಗೆ ಸತ್ತ ಸುಬ್ಬನನ್ನು ನೋಡಿದ ಯಜಮಾನ ಛೇ ಎಂದು ನಿಟ್ಟುಸಿರು ಬಿಡುತ್ತಾನೆ. ಈ ನಿಟ್ಟುಸಿರು ಸುಬ್ಬನ ಸಾವಿನ ಕುರಿತಾದ ನಿಟ್ಟುಸಿರು ಆಗಿರದೆ ತನಗೆ ಬರುವ ಗೇಣಿ ಕೈ ಮೀರಿ ಹೋಯಿತಲ್ಲಾ ಎಂದು ಬೇಸರವಾಗಿ ಒಡೆಯ ನಿಟ್ಟುಸಿರು ಬಿಡುತ್ತಾನೆ.

ಅದೇ ರೀತಿ ಮಲೆಗಳಲ್ಲಿ ಮದುಮಗಳು ಎಂಬ ಕಾದಂಬರಿಯಲ್ಲಿ ಗುತ್ತಿ ಮತ್ತು ತಿಮ್ಮಿ ಜೀತಪದ್ಧತಿಗೆ ಒಳಗಾಗುವರು. ಇದು ಕುವೆಂಪು ಅವರ ತುಂಬಾ ಜನಪ್ರಿಯ ಕಾದಂಬರಿಯಾಗಿ ಕಂಡುಬರುತ್ತದೆ. ಇದರಲ್ಲಿ

ಹಲವಾರು ಆಲೋಚನೆಗಳ ಹಿನ್ನೆಲೆಯಲ್ಲಿ ಕಾದಂಬರಿಯನ್ನು ರಚನೆ ಮಾಡಿದ್ದಾರೆ. ಅದರಲ್ಲಿ ದಲಿತ ಆಲೋಚನೆಯು ಸೇರಿಕೊಂಡಿದೆ. ಇದರಲ್ಲಿ ಗುತ್ತಿ ಮತ್ತು ತಿಮ್ಮಿ ಇಬ್ಬರು ಮದುವೆಯಾಗಬೇಕೆಂದು ಬಹು ಆಸೆಯನ್ನು ಇಟ್ಟುಕೊಂಡವರು. ಅಷ್ಟೇ ಅಲ್ಲ ಸೋದರತ್ತೆ ಸೋದರ ಮಾನವನ ಮಕ್ಕಳಾಗಿರುತ್ತಾರೆ. ಆದರೆ ತಿಮ್ಮಿಯ ಕೇರಿಯಲ್ಲಿ ಮತ್ತೊಬ್ಬ ಯುವಕ ಅವಳನ್ನು ಮದುವೆಯಾಗಲು ಸಿದ್ಧನಿರುತ್ತಾನೆ. ಊರ ಒಡೆಯ ಅವನಿಗೆ ಕೊಡಬೇಕೆಂದು ತೀರ್ಮಾನ ಮಾಡಿರುತ್ತಾನೆ. ಬೇರೆ ಊರಿನ ಕೇರಿಗೆ ಅವಳನ್ನು ಮದುವೆ ಮಾಡಿಕೊಟ್ಟರೆ ತಮ್ಮ ಕೆಲಸಗಳಲ್ಲಿ ಒಂದು ಆಳು ಕಡಿಮೆಯಾಗುತ್ತದೆ ಎಂದು ತಿಮ್ಮಿಯನ್ನು ಗುತ್ತಿಗೆ ಕೊಡಲು ಒಡೆಯ ತಕರಾರು ಮಾಡುತ್ತಾನೆ. ಇದರಿಂದ ಗುತ್ತಿ ಮತ್ತು ತಿಮ್ಮಿಯರ ಮದುವೆ ನಿಂತು ಹೋಗಲು ಮುನ್ಸೂಚನೆ ಬಂದಿತು. ಇದನ್ನು ಗಮನಿಸಿದ ಗುತ್ತಿ ತಿಮ್ಮಿಯರು ಓಡಿ ಹೋಗಿ ಮದುವೆಯಾಗಲು ರಾತ್ರಿಯ ವೇಳೆ ತಿಮ್ಮಿಯ ತಾಯಿಯ ಸಹಾಯದಿಂದ ಮನೆ ಬಿಟ್ಟು ಹೋದರು. ಇದನ್ನು ಕೇಳಿದ ಒಡೆಯ ಅವರನ್ನು ಹಿಡಿಯಲು ತಿಮ್ಮಿಯ ಮನೆಯವರಿಗೆ ಶಿಕ್ಷೆಯನ್ನು ಕೊಟ್ಟು ಅವರನ್ನು ತಂದು ಒಪ್ಪಿಸಿ ಎಂದು ಕಳಿಸುತ್ತಾನೆ. ಇದರಿಂದ ಬೇಸತ್ತ ಈ ದಲಿತರು ಆ ಊರು ಬಿಟ್ಟು ಹೋಗಿ ಬೇರೆ ಊರಲ್ಲಿ ಬದುಕುತ್ತಾರೆ. ಹೀಗೆ ಕುವೆಂಪು ಅವರು ದಲಿತಪರ ಚಿಂತನೆಯಲ್ಲಿ ಜೀತ ಪದ್ಧತಿಯಿಂದ ದಲಿತರು ಹೇಗೆ ಶೋಷಣೆಗೆ ಒಳಗಾಗುತ್ತಾರೆ ಎಂದು ಬರೆಯುತ್ತಾರೆ.

**ಶಿವರಾಮಕಾರಂತರು**

ಶಿವರಾಮಕಾರಂತರು ಒಬ್ಬ ಪ್ರಮುಖ ಕನ್ನಡ ಕಥನಕಾರರು. ಇವು ತಮ್ಮ ಹಲವಾರು ಕಥನಗಳಲ್ಲಿ ಮಾವಪರ, ಜೀವಪರ ಆಲೋಚನೆಗಳಿಂದ ಹಲವಾರು ಹೊಸ ಆಲೋಚನೆಗಳನ್ನು ಹುಟ್ಟುಹಾಕಿದರು. ಇವರ ದಲಿತ ಪರ ಸಂವೇದನೆಗೆ ಅನುಗುಣವಾಗಿ ಚೋಮನ ದುಡಿ ಎಂಬ ಕಾದಂಬರಿಯನ್ನು ನೋಡಬಹುದು.

ಈ ಕತೆಯಲ್ಲಿ ಚೋಮ ಎಂಬ ದಲಿತನು ಆಸ್ತಿಯನ್ನು ಹೊಂದಬೇಕು ಎನ್ನುವ ಮಹಾದಾಸೆಯಲ್ಲಿ ಇರುತ್ತಾನೆ. ಇವನು ಒಬ್ಬ ಶ್ರೀಮಂತರ ಮನೆಯಲ್ಲಿ ಗೇಣಿದಾರನಾಗಿ ಕೆಲಸ ಮಾಡುತ್ತಾನೆ. ಹಗಲಿಡಿ ಅವರ ಮನೆಯಲ್ಲಿ ದುಡಿದು ರಾತ್ರಿ ಬರುವಾಗ ಊಟದ ಸಲುವಾಗಿ ಕಾಳುಗಳನ್ನು ತರುತ್ತಾನೆ. ಇದರಿಂದ ತಮ್ಮ ಕುಟುಂಬವನ್ನು ನಿಭಾಯಿಸುತ್ತಾನೆ. ಇಲ್ಲಿ ಚೋಮ ಎಂದ ದಲಿತ ಭೂಮಿಯನ್ನು ಪಡೆಯುವ ಮಹಾದಾಸೆಯಿದ್ದರೂ ಅವನು ದಲಿತನೆಂಬ ಕಾರಣದಿಂದ ಅವನಿಗೆ ಭೂಮಿ ಸಿಗುವುದಿಲ್ಲ. ಶ್ರೀಮಂತನಿಗೆ ಭೂಮಿಯನ್ನು ಕೊಟ್ಟು ಚೋಮನನ್ನು ಸಮಾಧಾನ ಮಾಡಬೇಕು ಎಂದು ಅಂದುಕೊಳ್ಳುತ್ತಾನೆ. ಆದರೆ ವ್ಯವಸ್ಥೆ ಅವರಿಗೆ ಚೋಮನಿಗೆ ಭೂಮಿಯನ್ನು ಕೊಡದೆ ಇರುವ ಹಾಗೆ ಮಾಡುತ್ತದೆ. ಇಂತಹ ಮಹಾದಾಸೆಯನ್ನು ಹೊಂದಿರುವ ಚೋಮ ತನ್ನ ಶೋಷಣೆಯ ಕುರಿತು ಎಲ್ಲಿಯೂ ಪ್ರತಿಭಟನೆಯನ್ನು ಮಾಡುವುದಿಲ್ಲ. ಇದು ಲೇಖಕರ ಸಂಪ್ರದಾಯದ ಮಿತಿ ಎಂದು ಗುರುತಿಸಲಾಗುತ್ತದೆ.

**ಪ್ರಗತಿಶೀಲ ಸಾಹಿತ್ಯ**

ಪ್ರಗತಿಶೀಲ ಸಾಹಿತ್ಯ ಅವಧಿಯು ಕನ್ನಡ ಸಾಹಿತ್ಯದಲ್ಲಿ ತುಂಬ ಬದಲಾವಣೆಗಳನ್ನು ಕಂಡುಕೊಂಡಂತಹ ಅವಧಿ. ಇದು ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಪಲ್ಲಟಗಳನ್ನು ಕಂಡುಕೊಂಡ ಅವಧಿಯಾಗಿದೆ. ವ್ಯವಹಾರಕ ಕಾರಣಗಳ ಕ್ರಾಂತಿಗಳಿಂದ ತತ್ತರಿಸಿಹೋದ ಸಮಾಜದಲ್ಲಿ ಹಲವಾರು ವರ್ಗಗಳಾದ ಶ್ರೀಮಂತ, ಬಡವ, ಕೂಲಿಕಾರ್ಮಿಕ, ಶ್ರಮಿಕ, ಬಂಡವಾಳಶಾಹಿ ವರ್ಗಗಳು ಹುಟ್ಟಿಕೊಂಡಿರುತ್ತವೆ. ಇದರಿಂದ

ಕೆಳ ವರ್ಗದ ಮತ್ತು ಕೆಳಜಾತಿಯ ಜನರ ಜೀವನ ತುಂಬಾ ಹೀನಾಯವಾಗಿರುವುದು ಕಂಡುಬರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಹುಟ್ಟಿದ ಸಾಹಿತ್ಯ ಪ್ರಗತಿಪರತೆಯಿಂದ ಕೂಡಿತ್ತು. ಇಲ್ಲಿಯ ಬರಹಗಾರರು ಪ್ರಸ್ತುತದ ಮತ್ತು ವಾಸ್ತವಿಕತೆಯ ಸಮಸ್ಯೆಗಳನ್ನು ಅಳವಡಿಸಿಕೊಂಡು ಸಾಹಿತ್ಯ ರಚೆ ಮಾಡಿರುವುದರಿಂದ ದಲಿತರ ಸಮಸ್ಯೆಗಳಿಗೆ ಸ್ಪಂದಿಸಿರುವುದು ಕಂಡುಬರುತ್ತದೆ. ಅ.ನ.ಕೃಷ್ಣರಾಯರು, ಬಸವರಾಜ ಕಟ್ಟೀಮನಿ, ನಿರಂಜನ ಮುಂತಾದವರನ್ನು ಈ ಚಳವಳಿಯ ಪ್ರಮುಖ ಲೇಖಕರೆಂದು ಗುರುತಿಸಬಹುದಾಗಿದೆ.

## ನವ್ಯ

ಹೊಸ ಆರ್ಥಿಕ ನೀತಿಯ ಮತ್ತು ಹಲವಾರು ಪಂಚವಾರ್ಷಿಕ ಯೋಜನೆಗಳಿಂದ ಸಮಾಜದಲ್ಲಿ ಹಲವಾರು ವರ್ಗಗಳು ಹುಟ್ಟಿಕೊಂಡವು. ಮೇಲ್ವರ್ಗದವರು ಸರಕಾರಿ ಯೋಜನೆಗಳ ಸಿಂಹಪಾಲನ್ನು ಪಡೆದುಕೊಂಡು ಕೆಳಜಾತಿ ಮತ್ತು ಕೆಳವರ್ಗದವರನ್ನು ಶೋಷಣೆ ಮಾಡುತೊಡಗಿದರು. ಒಟ್ಟಾರೆಯಾಗಿ ಜನಜೀವನದ ಮೌಲ್ಯಗಳೇ ವ್ಯತ್ಯಾಸವಾಗುತ್ತಿದ್ದವು. ಈ ಎಲ್ಲ ಬೆಳವಣಿಗೆಗಳನ್ನು ಗಮನಿಸುತ್ತಿದ್ದ ಅಂದಿನ ಹೊಸ ಪೀಳಿಗೆಯ ಅನೇಕ ಪ್ರಜ್ಞಾವಂತ, ಬುದ್ಧಿಜೀವಿಗಳು ಬರಹಗಾರರು ಭ್ರಮನಿರಶನಗೊಂಡರು. ಹೊಸ ಸಂವೇದನೆಯ ಬದುಕಿಗಾಗಿ ಹಾತೊರೆಯುತ್ತಾ ಅವುಗಳಿಗೆ ಪ್ರತಿಕ್ರಿಯೆ ನೀಡಲು ಹೊಸ ಹಾದಿಯ, ಹೊಸ ಭಾಷೆಯ ಸಾಹಿತ್ಯ ಮಾರ್ಗ ಹುಡುಕಿಕೊಂಡರು. ಇದು ನವ್ಯಸಾಹಿತ್ಯದ ಸೃಷ್ಟಿಗೆ ಕಾರಣವಾಯಿತು.

ಪ್ರಗತಿಶೀಲರ ಕಥನಗಳಲ್ಲಿಯಂತೆ ಸಾಮಾಜಿಕ ಸುಧಾರಣೆ ಮತ್ತು ಸಾಮಾಜಿಕ ನ್ಯಾಯ ಪ್ರತಿಪಾದನೆ ಇವುಗಳಿಂದ ಕಥೆಗ ದೃಷ್ಟಿಕೇಂದ್ರವನ್ನು ತಪ್ಪಿಸಿ ಮನುಷ್ಯನ ಮನಸ್ಸು ಮತ್ತು ಮೂಲಪ್ರವೃತ್ತಿಗಳ ಕಡೆ ತಿರುಗಿಸಿದ್ದು ಚಾರಿತ್ರಿಕವಾಗಿ ಮಹತ್ವದ ಸಂಗತಿಯಾಗಿದೆ. ಇಂತಹ ಮನೋಧರ್ಮದ ನವ್ಯ ಕಥನಗಳಲ್ಲಿ ದಲಿತಪರ ಕಾಳಜಿಗಳಾಗಲಿ, ದಲಿತ ಶೋಷಣೆಯ ಕುರಿತಾದ ಪ್ರತಿಭಟನೆಯಾಗಲಿ ಕಂಡು ಬರದೆ ದಲಿತರನ್ನು ವ್ಯಕ್ತಿಕೇಂದ್ರಿತವಾದ ಹಿನ್ನೆಲೆಯಲ್ಲಿ ಅವನ ಬದುಕನ್ನು ಚಿತ್ರಿಸುತ್ತಾರೆ. ದಲಿತಪರ ಸಂವೇದನೆ ಇವರಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ.

ಉದಾಹರಣೆಗೆ ಶಾಂತಿನಾಥದೇಸಾಯಿವರ ಸಾಹಿತ್ಯದ ನೆಲೆಗಳನ್ನು ಗಮನಿಸಬಹುದು. ಶಾಂತಿನಾಥ ದೇಸಾಯಿಯವರು ವ್ಯಕ್ತಿಕೇಂದ್ರಿತ ನಗರ ಜೀವನ ಮತ್ತು ಗಂಡು ಹೆಣ್ಣಿನ ಲೈಂಗಿಕತೆ ಇವೆರಡು ಅವರ ಕಥೆಗಳ ಜೀವಾಳವಾಗಿರುವುದರಿಂದ ಅವರು ಆಧುನಿಕತೆಯ ಸಂವೇದನೆಕಾರನಾಗಿ ಕಂಡುಬರುತ್ತಾರೆ. ಅದಕ್ಕಾಗಿ ಕೆಳಜಾತಿಯ ಕೆಳವರ್ಗದ ಸ್ಥಾನದಲ್ಲಿರುವ ದಲಿತರ ಕುರಿತು ಕಥೆ ಬರೆಯುವುದು ಅವರಿಗೆ ಅವಶ್ಯಕವಾಗಿರಲಿಕ್ಕಿಲ್ಲ ಎಂದು ಕಂಡುಬರುತ್ತದೆ. ಇವರಿಗೆ ಇಂತಹ ಪರಿಸರ ದೊರಕದೆ ಇರುವುದು ಸಹ ಕಾರಣವಾಗಿರಬಹದು.

ಬರಮ್ಯಾ ಹೋಗಿ ನಿಖಿಲನಾಗಿದ್ದು ಕಥೆಯನ್ನು ಗಮನಿಸಬಹುದು. ಬರಮಾ ಎಂಬ ದಲಿತ ಹುಡುಗನು ಮೇಲ್ಜಾತಿಯ ನಿಖಿಲನಾಗುತ್ತಾನೆ. ಇವನು ಜೀತದಾರನಾಗಿದ್ದರೂ ತನ್ನ ಮನೆಯ ಕಿರಿಯ ಯಜಮಾನ ನಿಖಿಲನ ಜೀವನಶೈಲಿಯನ್ನು ಅನುಕರಿಸಿ ತಾನು ಅವನೆ ಆಗಬೇಕು ಎಂದು ಆಸೆ ಪುಡುತ್ತಾನೆ. ನಿಖಿಲನು ಭರಮ್ಯಾ ಎಂದು ಕರೆದರೆ ಹಾಗೆ ಕರೆಯಬೇಡ ಎಂದು ಪ್ರತಿಭಟನೆ ಮಾಡುತ್ತಾನೆ. ಈ ಪ್ರತಿಭಟನೆ ಕೇವಲ ಭರಮ್ಯನ ಪ್ರತಿಭಟನೆ ಆಗಿರದೆ ಒಟ್ಟಾರೆ ದಲಿತ ಶೋಷಣೆಯ ಪ್ರತಿಭಟನೆಯಾಗಿ ಕಂಡುಬರುತ್ತದೆ. ತಾನು ನಿಖಿಲನಿಗಿಂತ ಏನೂ ಕಡಿಮೆ ಇಲ್ಲ ಎಂದು ಅವನು ಹಾಸಿಗೆಯ ಮೇಲೆ ಹೋಗಿ ಮಲಗುತ್ತಾನೆ. ಕೊನೆಗೆ ಭರಮ್ಯಾ ಮಿಲಿಟರಿಯಲ್ಲಿ ನೌಕರಿಗೆ ಹೋದರೆ ತನ್ನ ಹೆಸರನ್ನು ನಿಖಿಲ ಪಾಟೀಲ ಎಂದು ಬದಲಾಯಿಸಿಕೊಳ್ಳುತ್ತಾನೆ. ಇಲ್ಲಿ ಭರಮ್ಯಾ ತನ್ನ

ಹೆಸರು ಬದಲಾಯಿಸಿಕೊಳ್ಳಬೇಕಾದರೆ ದಲಿತ ಜೀವನ ಎನ್ನುವುದು ಅವರನ್ನು ಎಷ್ಟು ಕ್ರೂರವಾಗಿ ಹಿಂಸಿಸುತ್ತಿತ್ತು ಎಂದು ತಿಳಿದುಬರುತ್ತದೆ.

ನವ್ಯದ ಪರಂಪರೆಯಲ್ಲಿ **ಕೆ. ಸದಾಶಿವ** ಅವರ ಕಥೆಗಳಲ್ಲಿ ಹೊಸ ದನಿ ಕಂಡುಬರುತ್ತದೆ. ಇವರ ಕಥನಗಳಲ್ಲಿ ಮಾನವೀಯ ಅಂತಃಕರಣ ಮತ್ತು ಸಮಾಜವಾದ, ಮಾರ್ಕ್ಸ್‌ವಾದ ಗುಪ್ತಗಾಮಿನಿಯಾಗಿ ಕಂಡುಬರುತ್ತದೆ. ಇದಕ್ಕೆ ಪ್ರತೀಕವಾಗಿ ಇವರ ಗಿಡ್ಡಿ ಕಥೆಯನ್ನು ಹೆಸರಿಸಬಹುದು.

ಪಿ. ಲಂಕೇಶ್ ಕನ್ನಡ ನವ್ಯ ಸಣ್ಣಕಥೆಗಳ ಪರಂಪರೆಯಲ್ಲಿ ಬರುವ ಪ್ರಮುಖ ಕಥೆಗಾರರು. ಇವರು ನವ್ಯ ಕಥೆಗಾರರಾಗಿ ನಂತರ ತಮ್ಮ ಕಥನಗಳಿಂದ ಕಥನಗಳಿಗೆ ಸಮಾಜಿ ಕೇಂದ್ರಿತ ವಸ್ತುಗಳ ಕುರಿತು ಕಥನಗಳನ್ನು ರಚನೆಮಾಡಿರುವುದು ಕಂಡುಬರುತ್ತದೆ. ಸಾಹಿತ್ಯಕ್ಕೆ ಸಮಾಜವಾದದ ಹೊಣೆಗಾರಿಕೆ ಮುಖ್ಯವಾಗಿ ಇರಲೇಬೇಕು ಎಂದು ತಮ್ಮ ಕಥನಗಳಲ್ಲಿ ಅಳವಡಿಸಿಕೊಂಡವರು. ಅವರು ತಮ್ಮ ಹಲವಾರು ಕಥನಗಳಲ್ಲಿ ಗ್ರಾಮೀಣ ಬದುಕಿನ ಸಂವೇದನೆಯ ಸ್ವರೂಪದಲ್ಲಿ ಊಳಿಗಮಾನ್ಯ ವ್ಯವಸ್ಥೆ, ಜಮೀನ್ದಾರಿ, ಪಾಳೆಯಗಾರಿಕೆ, ದಲಿತರ ಬದುಕಿನ ಮೇಲೆ ಹೇಗೆ ನಿಷ್ಠೂರತೆಯಿಂದ ವರ್ತನೆ ಮಾಡುತ್ತದೆ ಎಂದು ಚಿತ್ರಿಸುತ್ತಾ ಹೋಗುತ್ತಾರೆ. ಅವರ ಕಥನಗಳಲ್ಲಿ ಪಾತ್ರಗಳು, ವಸ್ತು ಬಹುಪಾಲು ಕೆಳಜಾತಿಯ ದಲಿತರ ಜನಾಂಗಕ್ಕೆ ಸಂಬಂಧಿಸಿರುವವು. ಅವರು ಊಳಿಗಮಾನ್ಯ ವ್ಯವಸ್ಥೆ, ಜಮೀನ್ದಾರಿ ಪದ್ಧತಿ, ಶ್ಯಾನುಭೋಗಿಕೆಯ ಕ್ರೌರ್ಯ, ಶೋಷಣೆ, ದಬ್ಬಾಳಿಕೆ, ಸಣ್ಣತನ, ಗೋಸುಂಬಿತನ, ದ್ವೇಷ, ಅಸೂಯೆ, ಗೊಡ್ಡು ಸಂಪ್ರದಾಯ, ನಂಬಿಕೆ, ಆಚರಣೆ, ದಲಿತ, ಅಸ್ಪೃಶ್ಯತೆ ಮುಂತಾದವುಗಳನ್ನು ಆಳವಾಗಿ ತಮ್ಮ ಕಥನಗಳಲ್ಲಿ ಪ್ರತಿಬಿಂಬಿಸುತ್ತಾರೆ. ನಿದರ್ಶನಕ್ಕೆ ಅವರ ಮುಟ್ಟಿಸಿಕೊಂಡವರ ಕಥೆಯನ್ನು ಹೆಸರಿಸಬಹುದು.

ಹಾಗೆಯೇ ಮತ್ತೊಬ್ಬ ಪ್ರಮುಖ ಲೇಖಕರಾದ ಪೂರ್ಣಚಂದ್ರತೇಜಸ್ವಿಯವರು ಹಲವಾರು ದಲಿತ ಪರ ಸಂವೇದನೆಯುಳ್ಳ ಕಥನಗಳನ್ನು ರಚಿಸಿದ್ದಾರೆ. ಡಾ. ಲೋಹಿಯಾ ಅವರ ಪ್ರಭಾವಕ್ಕೆ ಒಳಗಾದ ತೇಜಸ್ವಿಯವರು ಸಾಮಾಜಿಕ ಪ್ರಜ್ಞೆಯಿಂದ ನೇರವಾಗಿ, ಸರಳವಾಗಿ ಅಭಿವ್ಯಕ್ತಿಸಿದ್ದಾರೆ. ತೇಜಸ್ವಿಯವರು ದಲಿತ ಜನಾಂಗದ ಶೋಷಣೇಯನ್ನು ಕುರಿತು ಹಲವಾರು ಕಥನಗಳಲ್ಲಿ ಅಭಿವ್ಯಕ್ತಿಸಿರುತ್ತಾರೆ. ನಮ್ಮ ಸಮಾಜದ ಅಸಮಾನ ವ್ಯವಸ್ಥೆ ಅವರನ್ನು ಹೇಗೆ ಹತ್ಯೆ ಮಾಡುತ್ತದೆ ಮತ್ತು ಅವರು ಊಳಿಗಮಾನ್ಯ ವ್ಯವಸ್ಥೆಯಿಂದ ಅವರ ಬದುಕು ಯಾವ ರೀತಿಯಾಗಿ ಹೀನಾಯಮಾನ ಪರಿಸ್ಥಿತಿಗೆ ಬಂದಿದೆ ಎಂದು ಅವರು ಹಲವಾರು ಕಥೆಗಳ ಮೂಲಕ ದಲಿತರ ನೋವು ನಲಿವುಗಳಿಗೆ ಸ್ಪಂದಿಸುತ್ತಾರೆ. ಉದಾಹರಣೆಗೆ ಅವರ ಗುಡುಗು ಹೇಳಿದ್ದೇನು ಎಂಬ ಕಥೆಯನ್ನು ಹೆಸರಿಸಬಹುದು.

### ದಲಿತ ಸಾಹಿತ್ಯ

ದಲಿತ ಸಮುದಾಯದ ಪ್ರಜ್ಞಾವಂತರು ಬಸವಲಿಂಗಪ್ಪನವರ ಭೂಸಾ ಪ್ರಕರಣದಿಂದ ಪ್ರಭಾವಿತರಾಗಿ ದಲಿತ ಸಾಹಿತ್ಯ ಸಂಘಟನೆಗಳನ್ನು ಪ್ರಾರಂಭ ಮಾಡಿದರು. ಇದರ ಪ್ರೇರಣೆಯಿಂದ ಲೋಹಿಯಾವಾದಿಗಳು ಪ್ರಗತಿಪರ ಚಿಂತಕರು ಸೇರಿ ೧೯೭೩ರಲ್ಲಿ ಮೈಸೂರಿನಲ್ಲಿ ಜಾತಿವಿನಾಶ ಸಮ್ಮೇಳನ ನಡೆಸಿದರು. ಇದರಲ್ಲಿ ಲಂಕೇಶ್, ಪೂರ್ಣಚಂದ್ರತೇಜಸ್ವಿ, ರಾಮದಾಸು, ಶ್ರೀಕಷ್ಣ ಆಲನಹಳ್ಳಿ, ದೇವನೂರು ಮಹಾದೇವ, ಸಿದ್ದಲಿಂಗಯ್ಯ ಮುಂತಾದವರು ಭಾಗವಹಿಸಿದ್ದರು. ಈ ಎಲ್ಲ ಚಿಂತಕರು ದಲಿತ ಸಾಹಿತ್ಯವನ್ನು ರಚನೆ ಮಾಡಿದರು. ನಂತರ

ಇವರೆ ಶೂದ್ರ ಸಾಹಿತ್ಯ ಚಳವಳಿಯ ಹೆಸರಿನಲ್ಲಿ ೧೯೭೪ ರಲ್ಲಿ ಸಮ್ಮೇಳನ ನಡೆಸಿದರು. ಇದರಲ್ಲಿ ದೇವನೂರು, ಸಿದ್ದಲಿಂಗಯ್ಯ, ಪಿ. ಲಂಕೇಶ್ ಇವರು ಭಾಗವಹಿಸಿದ್ದರು. ಬೆಂಗಳೂರಿನಲ್ಲಿ ೧೯೭೨ ರಲ್ಲಿ ಎಂ. ತಿಮ್ಮರಾಯಸ್ವಾಮಿಯವರ ನೇತೃತ್ವದಲ್ಲಿ ದಲಿತ ಕ್ರಿಯಾ ಸಮಿತಿ ಆರಂಭವಾಯಿತು. ೧೯೭೪ ರಲ್ಲಿ ಭದ್ರಾವತಿಯಲ್ಲಿ ಬಿ. ಕೃಷ್ಣಪ್ಪನವರ ನಾಯಕತ್ವದಲ್ಲಿ ದಲಿತ ಸಂಘರ್ಷ ಸಮಿತಿ ಜನ್ಮತಾಳಿತು. ನಂತರ ವಿಶಾಲವ್ಯಾಪ್ತಿಯಲ್ಲಿ ಎಲ್ಲಾ ದಲಿತ ಕ್ರಿಯಾಶಕ್ತಿಗಳು ಸೇರಿ ಕರ್ನಾಟಕ ದಲಿತ ಸಂಘರ್ಷ ಸಮಿತಿಯು ನಿರ್ಮಾಣಗೊಂಡಿತು. ನಂತರ ೧೯೭೮ರಲ್ಲಿ ದಲಿತ ಬರಹಗಾರರ ಮತ್ತು ಕಲಾವಿದರ ಯುವ ಸಂಘಟನೆಯಿಂದ ಅಧಿಕೃತವಾಗಿ ದಲಿತ ಸಾಹಿತ್ಯ ಚಳವಳಿ ರೂಪುಗೊಂಡಿತು. ಮುಖ್ಯವಾಗಿ ಇದರ ರೂವಾರಿಗಳು ಬಿ. ಕೃಷ್ಣಪ್ಪ, ದೇವನೂರು ಮಹಾದೇವ, ಅರವಿಂದ ಮಾಲಗತ್ತಿ, ಮನಜಾ, ಮುಂತಾದವರು.

**ದೇವನೂರು ಮಹಾದೇವ**

ಇವರು ದಲಿತಲೋಕದ ಕತ್ತಲ ಬದುಕನ್ನು ಅದೇ ಮೂಲದಿಂದ ಬಂದು ಅನಾವರಣ ಮಾಡಿದ ಮೊದಲ ಪೀಳಿಗೆಯ ಮೊದಲ ಕಥೆಗಾರರು. ಅವರ ಕಥೆಗಳ ನೆಲೆಗಳಿರುವುದು ಪ್ರಧಾನವಾಗಿ ಬದುಕಿನ ಶೋಷಣೆ. ಇದು ಎರಡು ತೆರನಾಗಿ ಕಾಣಿಸಿಕೊಳ್ಳುತ್ತದೆ. ಒಂದು ಒಳಗಿನ ಶೋಷಣೆ ಮತ್ತೊಂದು ಹೊರಗಿನ ಶೋಷಣೇ. ಅವರ ಕಥನಕಲೆಗಳಲ್ಲಿ ಪ್ರತಿಭಟನೆ, ಸಂಘರ್ಷಾತ್ಮಕವಾಗಿ ಗುಪ್ತಗಾಮಿನಿಯಂತೆ ಕೆಲಸಮಾಡುತ್ತದೆ. ಇವರು ದಲಿತರ ಬದುಕನ್ನು ಎತ್ತಿ ನಿಲ್ಲಿಸಿ ಅದನ್ನು ಚಿಗುರಿಸುವ ಸಂಯಮವನ್ನು ತಮ್ಮ ಕಥನಗಳಲ್ಲಿ ತೋರುತ್ತಾರೆ. ಇವರ ಕಥನಗಳು ಆವೇಶ, ಆರ್ಭಟ ದಾಟಿಗಳಿಂದ ಕೂಡಿರದೆ ನಿರ್ಲಿಪ್ತವಾಗಿ ಸೂಕ್ಷ್ಮವಾದ ದಾಟಿಯಲ್ಲಿ ಮುಂದುವರೆಯುತ್ತಿರುತ್ತವೆ. ಹೀಗೆ ಅವರು ತಮ್ಮ ದಲಿತ ಬದುಕನ್ನು ಪ್ರಾದೇಶಿಕವಾದ ಭಾಷೆಯಲ್ಲಿ ಕಟ್ಟಿಕೊಡುತ್ತಾ ಹೋಗುತ್ತಾರೆ. ಹೀಗೆ ದಲಿತ ಲೋಕವನ್ನು ಚಿತ್ರಿಸಿದ ಈ ದಲಿತ ಸಾಹಿತಿಯ ದಲಿತ ಸಂವೇದನೆ ಕನ್ನಡ ಸಾಹಿತ್ಯಕ್ಕೊಂದು ಹೊಸ ದಿಕ್ಕನ್ನು ತೋರಿಸಿತು.

ದೇವನೂರರು ಒಬ್ಬ ದಲಿತ ಸಾಹಿತಿಯಾಗಿ ಬಡವರ ಅಂದರೆ ದಲಿತರ ಬದುಕಿನ ಶೋಷಣೇ, ಹಸಿವು, ಬಡತನ, ದಾರಿದ್ರ್ಯ, ಅಸಹಾಯಕತೆ, ಅಸ್ಪೃಶ್ಯತೆ, ಪ್ರತಿಭಟನೆ, ಸಂಘರ್ಷಗಳನ್ನು ಕಲಾತ್ಮಕ ನೆಲೆಯಲ್ಲಿ ಅಭಿವ್ಯಕ್ತಿಸುತ್ತಾರೆ. ಇದಕ್ಕೆ ಪ್ರತೀಕಗಳಾದ ಅವರ ಕಥನಗಳು ಎಂದರೆ ಮಾರಿಕೊಂಡವರು, ಮೂಡಲ ಸೀಮೇಲಿ ಕೊಲೆಗಿಲೆ, ಒಡಲಾಳ ಮುಂತಾದುವನ್ನು ಹೆಸರಿಸಬಹುದು.

ಊಳಿಗಮಾನ್ಯ ಪದ್ಧತಿಯ ದಲಿತ ಜನರು ತಮ್ಮ ಹಸಿವು, ದಾರಿದ್ರ್ಯ ಅಸಾಹಯಕತೆಯಿಂದ ಶೋಷಣೆಗೆ ಒಳಗಾಗಿ ಈ ಎಲ್ಲ ಕಾರಣಗಳಿಂದ ಯಜಮಾನಿಕೆಯ ವ್ಯವಸ್ಥೆಯಲ್ಲಿ ಒಂದು ಕುಟುಂಬ ನಾಶವಾಗುತ್ತದೆ ಎಂದು ಮಾರಿಕೊಂಡವರು ಕಥೆಯಲ್ಲಿ ಬಿಚ್ಚಿಡುತ್ತಾ ಹೋಗುತ್ತಾರೆ. ಈ ಕತೆಯಲ್ಲಿ ಬೀರ ಮತ್ತು ಲಕ್ಷ್ಮಿ ಎಂಬ ದಂಪತಿಗಳು ಹೊಟ್ಟೆಗೆ ತಿನ್ನಲು ಏನು ಇಲ್ಲದೆ ಬಡತನದ ಬೇಗೆಯನ್ನು ತಾಳಲಾರದೆ ಮತ್ತೊಂದು ಊರಿಗೆ ಅಂದರೆ ಮೈಸೂರಿಗೆ ದುಡಿಯಲು ವಲಸೆ ಹೋಗುತ್ತಾರೆ. ಹೇಗೋ ತಡಕಾಡಿ ನಂಜನಗೂಡಿನ ರೈಲನ್ನು ಹತ್ತುತ್ತಾರೆ. ಆದರೆ ಇವರಿಗೆ ಟಿಕೇಟು ತೆಗೆದುಕೊಳ್ಳಲು ಗತಿಯಿಲ್ಲದೆ ಸುಮ್ಮನಿರುತ್ತಾರೆ. ಆದರೆ ಇವರ ಟ್ರೇನಿನ ಅಧಿಕಾರಿ ಅಂದರೆ ಈ ವ್ಯವಸ್ಥೆಯ ಶೋಷಣಾ ವರ್ಗ ಸುಮ್ಮನೆ ಇರಬೇಕಲ್ಲ. ಅವರು ಸುಮ್ಮನಿರಲು ಸಾಧ್ಯವಿರದೆ ಟಿಕೇಟ್ ಇಲ್ಲದ ಕಾರಣ ಆ ಅಧಿಕಾರಿಯಿಂದ ಒದೆ ತಿಂದು ಟ್ರೇನಿನ ಹೊರಗೆ ಬಂದು ಬೀಳುತ್ತಾರೆ. ಅಲ್ಲಿಯೆ ಇದ್ದ ಗೌಡ ಇವರ

ಮಾನ ಉಳಿಸುವ ನೆಪದಲ್ಲಿ ಮರಳಿ ಕರೆದುಕೊಂಡು ಹೋಗಿ ತಮ್ಮ ತೋಟದಲ್ಲಿ ಜೀತದಾಳುಗಳನ್ನಾಗಿ ನೇಮಕ ಮಾಡಿಕೊಳ್ಳುತ್ತಾನೆ. ಇಲ್ಲಿಂದ ಶುರುವಾಗುತ್ತದೆ ಇವರ ಶೋಷಣೆ. ಈ ಇಬ್ಬರು ದಂಪತಿಗಳು ಗೌಡನ ತೋಟದಲ್ಲಿ ಹಗಲೆಲ್ಲ ದುಡಿದು ಬರುತ್ತಾರೆ. ಅವರಿಂದ ತಮ್ಮ ಹೊಟ್ಟೆ ಹಸಿವನ್ನು ನೀಗಿಸಿಕೊಳ್ಳಲು ಪರದಾಡುತ್ತಾರೆ. ಇವರು ಇಷ್ಟಕ್ಕೆ ಸುಮ್ಮನಿರದೆ ಶೋಷಕ ಗೌಡನ ಮಗನಾದ ಕಿಟ್ಟಪ್ಪನ ಕಣ್ಣು ಲಕ್ಷ್ಮಿಯ ಮೇಲೆ ಬಿದ್ದು ತನ್ನ ಲೈಂಗಿಕ ತೃಪ್ತಿಗಾಗಿ ಆಕೆಯನ್ನು ಬಳಸಿಕೊಳ್ಳುತ್ತಾನೆ.

ದೇವನೂರರು ತಮ್ಮ ಕಥನಗಳಲ್ಲಿ ಒಬ್ಬ ದಲಿತ ಜನಾಂಗದವರಾಗಿ ದಲಿತ ಲೋಕದ ಕುರಿತು ಚಿತ್ರಿಸುವಾಗ ದಲಿತತ್ವದ ಆಶಯಗಳನ್ನು ಬಿಂಬಿಸುತ್ತಾರೆ. ದಲಿತರು ಹೇಗೆ ನಮ್ಮ ಶ್ರೇಣೀಕೃತ ವ್ಯವಸ್ಥೆಯಲ್ಲಿ ತಾರತಮ್ಯತೆಯಿಂದ ಜೀವನ ಮಾಡುತ್ತಾ ಊಳಿಗಮಾನ್ಯ ಪದ್ಧತಿಯಲ್ಲಿ ಜೀತದಾಳುಗಳಾಗಿ ಸಂಪೂರ್ಣವಾಗಿ ತಮ್ಮನ್ನು ಮಾರಿಕೊಳ್ಳುವ ಪರಿಸ್ಥಿತಿ ಬಂದಿದೆ ಎಂಬುದನ್ನು ಮಾರಿಕೊಂಡವರು ಕಥೆ ಚಿತ್ರಿಸುತ್ತದೆ.

ದೇವನೂರು ಅವರ ಒಡಲಾಳ, ಕುಸುಮಬಾಲೆ ಕೃತಿಗಳು ದಲಿತತ್ವದ ನೆಲೆಯಲ್ಲಿ ಅರಳಿದ ಶ್ರೇಷ್ಠ ಕಲಾಕುಸುಮಗಳಾಗಿವೆ.

ದಲಿತ ಸಾಹಿತ್ಯ ಪಂರಪರೆಯಲ್ಲಿ ಮ.ನ.ಜವರಯ್ಯ ಮತ್ತು ಅರವಿಂದ ಮಾಲಗತ್ತಿಯವರನ್ನು ಸಹ ಹೆಸರಿಸಬಹುದು.

**ಬಂಡಾಯ ಸಾಹಿತ್ಯ**

ಕನ್ನಡ ಸಾಹಿತ್ಯದಲ್ಲಿ ದಲಿತ ಚಳವಳಿಗಳು ನಡೆಯುವ ಸಂದರ್ಭದಲ್ಲಿ ದಲಿತರು ತಾವು ದಲಿತ ಸಾಹಿತ್ಯದ ಮೂಲಕ ದಲಿತರಿಗೆ ಆಗುವ ಶೋಷಣೆಗಳನ್ನು ಹೋಗಲಾಡಿಸಲು ದಲಿತ ಲೇಖಕರ ಸಮ್ಮೇಳನಗಳನ್ನು ನಡೆಸುತ್ತಿದ್ದರು. ಆಗ ೧೯೭೯ ಮಾರ್ಚ್ ೧೦ ರಂದು ಸಾಹಿತ್ಯ ಪರಿಷತ್ತು ಧರ್ಮಸ್ಥಳದಲ್ಲಿ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನವನ್ನು ನವ್ಯ ಕವಿ ಗೋಪಾಲಕೃಷ್ಣ ಅಡಿಗರ ಅಧ್ಯಕ್ಷತೆಯಲ್ಲಿ ನಡೆಸಲು ಸಿದ್ಧತೆ ನಡೆಸಿತು. ಈ ಸಮ್ಮೇಳನದಲ್ಲಿ ದಲಿತ ಸಾಹಿಯ ಗೋಷ್ಠಿ ಇಡಬೇಕೆಂದು ಆಗ್ರಹಪಡಿಸಿದಾಗ ಪರಿಷತ್ತು ನಿರಾಕರಿಸುತ್ತದೆ. ಇದರಿಂದ ಬಂಡೆದ್ದ ದಲಿತ, ಪ್ರಗತಿಪರ ಸಾಹಿತಿಗಳು, ಕಲಾವಿದರು, ಪರ್ಯಾಯವಾಗಿ ಬೆಂಗಳೂರಿನಲ್ಲಿ ಸಂಘಟನೆಗೊಂಡು ೧೯೭೯ರ ಮಾರ್ಚ್ ೧೦ ರಂದು ಬಂಡಾಯ ಸಾಹಿತ್ಯ ಸಮ್ಮೇಳನವನ್ನು ನಡೆಸಿದರು. ಈ ಸಮ್ಮೇಳನಕ್ಕೆ ತೆಲುಗಿನ ಪ್ರಸಿದ್ಧ ಕ್ರಾಂತಿಕಾರಿ ಕವಿ ಶ್ರೀ ಶ್ರೀ ಅವರು, ಮರಾಠಿ ಲೇಖಕಿ ಮತ್ತು ಕಮ್ಯುನಿಷ್ಟ್ ಧೋರಣೆಯ ಗೋದಾವರಿ ಪುರುಳೇಕರ್ ಭಾಗವಹಿಸಿ ಸಮ್ಮೇಳನ ಯಶಸ್ವಿಯಾಯಿತು. ಅಧಿಕೃತವಾಗಿ ಬಂಡಾಯ ಸಾಹಿತ್ಯ ಸಂಘಟನೆ ಚಳವಳಿ ರೂಪ ತಳೆಯಿತು. ಇದರ ಮುಂದಾಳುಗಳಾಗಿ ಡಿ. ಆರ್. ನಾಗರಾಜ್, ಬರಗೂರು ರಾಮಚಂದ್ರಪ್ಪ, ಸಿದ್ದಲಿಂಗಯ್ಯ, ಕಾಳೇಗೌಡ ನಾಗವಾರ, ಚೆನ್ನಣ್ಣವಾಲೀಕರ್, ಚಂದ್ರಶೇಖರ್ ಪಾಟೀಲ್, ಬಸವರಾಜ ಸಬರದ, ಕುಂವೀ, ಅಲ್ಲಮ ಪ್ರಭು ಬೆಟ್ಟದೂರು, ಸಿ. ವೀರಣ್ಣ, ಆರ್. ವಿ. ಬಂಡಾರಿ, ಜಾಣಗೆರೆ ವೆಂಕಟರಮಣಯ್ಯ, ಶಿವರಾಮಕಾಡನಕುಪ್ಪೆ, ಬಿ.ಟಿ. ಲಲಿತನಾಯಕ್, ಎಲ್. ಹನುಮಂತಯ್ಯ ಮುಂತಾದವರು ಕಂಡುಬರುತ್ತಾರೆ.

## ಟಿಪ್ಪಣಿಗಳು

೧. ಎಸ್. ಎಲ್. ಪ್ರಭಾವತಿ, ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ನೆಲೆಗಳು, ಪು. ೩

೨. ಅದೇ., ಪು.೩

೩. ಅದೇ., ಪು. ೪

೪. ಅದೇ., ಪು. ೫

## ಅಧ್ಯಾಯ ಮೂರು

# ಮೊಗಳ್ಳಿ ಕಥೆಗಳ ದಲಿತ ಸಂವೇದನೆ

ದಲಿತ ಸಂಸ್ಕೃತಿಯ ಗಟ್ಟಿ ಬರಹಗಾರರಲ್ಲಿ ಒಬ್ಬರಾದ ಮೊಗಳ್ಳಿಗಣೇಶ್ ಅವರು ಸೃಜನಶೀಲ ದಲಿತ ಲೇಖಕರಾಗಿ ಕನ್ನಡ ಸಾಹಿತ್ಯದ ತುತ್ತತುದಿಯಲ್ಲಿದ್ದಾರೆ. ಕನ್ನಡ ಕಥಾಸಂವೇದನೆಯನ್ನು ಸಮಷ್ಟಿ ಜೀವನ ಮೌಲ್ಯಗಳ ಆರ್ದ್ರತೆಯಿಂದ ವಿಸ್ತರಿಸಿದ ಮೊಗಳ್ಳಿ ಗಣೇಶ್ ಅವರ ಕಥನಗಳು ನಮ್ಮ ಕಾಲದ ತಲ್ಲಣ ಹಾಗೂ ಅದರ ಸಾಧ್ಯತೆಗಳನ್ನು ದಟ್ಟವಾಗಿ ಕಟ್ಟಿಕೊಡುತ್ತ ಬಂದಿದ್ದಾರೆ. ಅದೇ ಹಾದಿಯಲ್ಲಿ ಅಂತಃಕರಣದ ದಿಕ್ಸೂಚಿ ಹಿಡಿದು ಬಹುದೂರದ ಪಯಣಕ್ಕೆ ಹೊರಟಿರುವ ಈ ಕಥೆಗಳು ನಿಸ್ಸಂದೇಹವಾಗಿ ನಮ್ಮನ್ನು ನಿರಂತರವಾಗಿ ಕಾಡುತ್ತಲೇ ಮಾನವೀಯ ಚಿಲುಮೆಯಲ್ಲಿ ಮೀಯಿಸುತ್ತವೆ. ದಲಿತ ಸಂವೇದನೆಯ ನಾಡಿ ಬಡಿತದಿಂದ ತೆರೆದುಕೊಳ್ಳುವ ಅವರ ಕಥನಗಳು ಜಗತ್ತಿನ ಯಾವುದೇ ಅಂತಃಕರಣದ ಕಥನಗಳ ಜೊತೆಗೆ ಸಮನಾಗಿ ನಿಲ್ಲಬಲ್ಲವಾಗಿವೆ. ಮೊಗಳ್ಳಿ ಗಣೇಶ್‌ರವರು ಒಬ್ಬ ದಲಿತ ಲೇಖಕರಾಗಿ ದಲಿತ ಜನಾಂಗದ ಅಂತಃಸತ್ವವನ್ನು ಜಗತ್ತಿನ ಈ ಹೊತ್ತಿನ ಮುಂದೆ ಅನಾವರಣಗೊಳ್ಳುತ್ತಿರುವುದು ವಿಶೇಷವಾಗಿದೆ. ಅದಕ್ಕಾಗಿ ಇಂತಹ ಒಬ್ಬ ದಲಿತ ಜನಾಂಗದ ಸೂಕ್ಷ್ಮಸಂವೇದನಕಾರನ ಕಥನಗಳಲ್ಲಿ ಅವರ ದಲಿತ ಸಂವೇದನೆಯನ್ನು ಗುರುತಿಸುವುದು ಸೂಕ್ತವಾಗಿರುತ್ತದೆ. ದಲಿತ ಸಂವೇದನೆಯನ್ನು ಅವರ ಕಥನಗಳ ವಸ್ತು, ನಿರೂಪಣೆ, ಕಥಾಸಂವಿಧಾನ, ಅನುಭವ, ಭಾಷೆ, ಶೈಲಿ, ವರ್ಣನೆ ಮುಂತಾದ 'ಪರಿಕಲ್ಪನೆ'ಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗುತ್ತದೆ.

**೩.೧ ವಸ್ತು**

ಮೊಗಳ್ಳಿಯವರ ಕಥನಗಳ ವಸ್ತುವಿನ ಹಿನ್ನೆಲೆಯಲ್ಲಿ ಅವರ ದಲಿತ ಸಂವೇದನೆಯನ್ನು ತಿಳಿದುಕೊಳ್ಳುವುದಕ್ಕಿಂತ ಮುಂಚಿತವಾಗಿ ವಸ್ತು ಎಂದರೇನು ಎಂದು ನೋಡುವುದು ಸೂಕ್ತವಾಗಿದೆ. ವಸ್ತು ಎನ್ನುವುದು ಒಂದು ಪರಿಕಲ್ಪನೆ, ಅದೊಂದು ಪಾರಿಭಾಷಿಕವಾದ ಪದವಾಗಿದೆ. ವಸ್ತುವಿನ ಇಂದ್ರಿಯಗೋಚರವಾದ ಅರ್ಥದಲ್ಲಿ ನೋಡಿದರೆ ಅದೊಂದು ಪದಾರ್ಥ, ದ್ರವ್ಯವಾಗಿ ಕಂಡುಬರುತ್ತದೆ. ಇನ್ನೊಂದು ಅರ್ಥದಲ್ಲಿ ವಸ್ತು ಎಂದರೆ ಕಾವ್ಯ, ಕಾದಂಬರಿ, ಕಥೆ ಇತ್ಯಾದಿಗಳ ಒಳಗಣ ಇರುವ ಕಥಾವಿಷಯ (Plot : theme) ಎಂದು ಅರ್ಥವನ್ನು ಪಡೆದುಕೊಳ್ಳುತ್ತದೆ. ಇಲ್ಲಿ ಎರಡನೆಯ ಅರ್ಥವಾದ ಕಥೆ, ಕಾವ್ಯದ ಒಳಗಡೆ ಅಡಗಿರುವ ವಿಷಯವನ್ನು ವಸ್ತು ಎಂದು ಕರೆಯಲಾಗುತ್ತದೆ. ವಸ್ತು ಎನ್ನುವುದು ಕಾವ್ಯ, ಕಾದಂಬರಿ, ಕಥೆಗಳ ಒಳಗಡೆ ಇರುವ ಕಥಾವಸ್ತು ಎನ್ನುವುದು ತುಂಬಾ ವಿಶಾಲವಾದ ಅರ್ಥದಲ್ಲಿ ಬಳಕೆಯಾಗುತ್ತದೆ. ಜೀವನದ ಪ್ರತಿಯೊಂದು ವಿಷಯ ವಸ್ತುಗಳು ಸಾಹಿತ್ಯದ ವಸ್ತುಗಳಾಗುತ್ತವೆ. ಇಂತಹ ಒಂದು ವಿಶಾಲಾರ್ಥವನ್ನು ಹೊಂದಿರುವ ಈ ಒಂದು ಪರಿಕಲ್ಪನೆ ಮೊಗಳ್ಳಿಗಣೇಶ್‌ರವರ ಕಥನಗಳಲ್ಲಿ ಹೇಗೆ ಅಡಗಿದೆ, ಇದು ಅವರ ದಲಿತಲೋಕವನ್ನು ಹೇಗೆ ತೆರೆದಿಡುತ್ತದೆ ಎಂಬುದನ್ನು ಅರಿಯಲು

ಪ್ರಯತ್ನಿಸಲಾಗುವುದು. ಒಟ್ಟಾರೆ ಅವರ ಕಥನದ ಸ್ವರೂಪದಲ್ಲಿ ಅಡಕವಾಗಿರುವ ದಲಿತ ಸಂವೇದನೆಯ ಸ್ವರೂಪವನ್ನು ಅರ್ಥೈಸುವುದಾಗಿದೆ.

ಮೊಗಳ್ಳಿಗಣೇಶ್ ಅವರು ಸಿದ್ದಲಿಂಗಯ್ಯ, ದೇವನೂರು ಮಹಾದೇವ ಅವರ ಸಾಲಿನಲ್ಲಿ ನಿಲ್ಲುವ ದಲಿತ ಹಿನ್ನೆಲೆಯ ಸಾಹಿತಿಯಾಗಿರುವುದರಿಂದ ಅವರು ದಲಿತರ ನೋವು ನಲಿವುಗಳನ್ನು ದುಃಖ ದುಮ್ಮಾನಗಳನ್ನು ಹೇಗೆ ಕಲೆಯ ಚೌಕಟ್ಟಿನಲ್ಲಿ ಅಭಿವ್ಯಕ್ತಿಸಿದ ಬಗೆ ಕುತೂಹಲಕಾರಿಯಾಗಿದೆ. ಇಂತಹವರ ದಲಿತ ಸಂವೇದನೆ ಸ್ಪಷ್ಟವಾಗಿ, ನಿಚ್ಚಳವಾಗಿ ಅವರ ಸಾಹಿತ್ಯದಲ್ಲಿ ಗೋಚರವಾಗುತ್ತದೆ.

ಮೊಗಳ್ಳಿ ಗಣೇಶ್ ಅವರು ತಮ್ಮ ಕಥನಗಳಿಗೆ ಬಳಸಿಕೊಂಡಿರುವ ವಸ್ತು ತಾವು ಕಂಡುಂಡ ಅನುಭವಗಳೆ ಎಂದು ಹೇಳಬಹುದು. ಅವರು ಕಂಡು ಅನುಭವಿಸಿದ, ಅವರ ಗಮನಕ್ಕೆ ಬಂದ ದಲಿತ ಜೀವನ, ಹಳ್ಳಿಯ ಮುಗ್ಧ ದಲಿತರ ಬಾಳು, ಅವರ ಬಡತನ, ಹಸಿವು, ಜಾತಿ, ರಾಜಕೀಯ ಕಲಹ, ಮೇಲ್ಜಾತಿಯವರ ಶೋಷಣೆಗೆ ಬಲಿಯಾದ ಮುಗ್ಧ ದಲಿತ ಅವಿದ್ಯಾವಂತರ ನೋವು ವಿದ್ಯಾವಂತ ದಲಿತರ ಅಸಹಾಯಕತೆ, ಸಾಮಾಜಿಕ ಸಮಸ್ಯೆಗಳಾದ ವರ್ಣ, ವರ್ಗ ಸಂಘರ್ಷ, ಅಸ್ಪೃಶ್ಯತೆ, ಊಳಿಗಮಾನ್ಯ ಪದ್ಧತಿ, ಸ್ತ್ರೀ ಮತ್ತು ಪುರುಷ ಶೋಷಣೆ, ಮೇಲುಕೀಳು, ಸಾಮಾಜಿಕ ಮೂಢನಂಬಿಕೆಗಳ ಹೆಸರಿನಲ್ಲಿ ನಡೆಯುವ ಅನಿಷ್ಟ ಆಚಾರ, ವಿಚಾರ, 'ಭೂಮಿ' ವಿಷಯಕ್ಕೆ ಸಂಬಂಧಿಸಿದ ಕಲಹ, ಪುರೋಹಿತ, ಮತ್ತು ಶೂದ್ರ, ಮುಂತಾದ ಚಿತ್ರಣಗಳು ಇವರ ಕಥೆಗಳ ವಸ್ತುಗಳಾಗಿ ಕಂಡುಬರುತ್ತವೆ. ಇವರ ಈ ಎಲ್ಲ ಕಥಾವಸ್ತುಗಳು ಅವರ ದಲಿತ ಸಂವೇದನೆಯನ್ನು ಸ್ಪಷ್ಟೀಕರಿಸುತ್ತವೆ.

ಹಸಿವು ಬಡತನ ಮೊಗಳ್ಳಿ ಗಣೇಶ್‌ರವರ ಕಥನಗಳಲ್ಲಿ ಹೆಚ್ಚು ಪ್ರತಿಧ್ವನಿಸುವ ವಸ್ತುವಾಗಿದೆ. ಶೋಷಿತ ಜನಸಮುದಾಯದಲ್ಲಿ ಹುಟ್ಟಿ ಬೆಳೆದ ಇವರು ಅವರ ದುಃಖ ದುಮ್ಮಾನಗಳನ್ನು ಕಣ್ಣಾರೆ ಕಂಡವರು. ಹಸಿವು ಬಡತನದ ಸಂಘರ್ಷಾತ್ಮಕ ಬದುಕಿನೊಟ್ಟಿಗೆ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಹಪಹಪಿಸುವ ದಲಿತ ಜಗತ್ತನ್ನು ಅದರ ಜೀವದನಿಯನ್ನು 'ಭತ್ತ', 'ತೊಟ್ಟಿಲು', 'ಒಂದು ಹಳೆ ಚಡ್ಡಿ', 'ಅನಾದಿ' ಮೊದಲಾದ ಕಥಾನಕಗಳಿಂದ ಕಟ್ಟಿಕೊಡುತ್ತಾರೆ. ಅವರ ಅನುಭವಲೋಕದೊಟ್ಟಿಗೆ ಬೆರೆತು ಹೋಗಿರುವ ಭಾರತೀಯ ಪಾರಂಪರಿಕ ಗ್ರಾಮೀಣ ಜಗತ್ತಿನ ಇನ್ನಿತರೆ ಸಮುದಾಯಗಳ ನೋವು, ನಲಿವುಗಳು, ವೈರುಧ್ಯಗಳು ಇವೆಲ್ಲವನ್ನೂ ಮೀರಿದ ಮಾನವೀಯ ಅಂತಃಕರಣದ ನೆಲೆಯಲ್ಲಿ ಅವರ ಕಥನ ಜಗತ್ತು ತುಡಿಯುತ್ತಿರುವುದನ್ನು ಕಾಣಬಹುದಾಗಿದೆ.

'ಭತ್ತ' ಕಥೆಯಲ್ಲಿ ಹಸಿವಿನಿಂದ ಪರದಾಡುವ ದಲಿತರು ಮರುದಿನ ತಮ್ಮ ಮನೆ ತುಂಬುವ 'ಭತ್ತ'ದ ಸಂಭ್ರದಲ್ಲಿರುತ್ತಾರೆ. ಭತ್ತದ ರಾಶಿಯನ್ನು ಮಾಡಲು ಅದನ್ನು ಕೊಯ್ಯಲು ವಿವಧ ಆಯುಧಗಳನ್ನು ಚೂಪುಗೊಳಿಸುತ್ತಾರೆ. ಅಲ್ಲದೆ ಭತ್ತ ತುಂಬಿಡಲು ಹಲವಾರು ಪಾತ್ರೆಗಳನ್ನು ಸಜ್ಜುಗೊಳಿಸುತ್ತಾರೆ. ಅದರಿಂದ ವಿಧವಿಧವಾದ ಅಡುಗೆ ಮಾಡಿ ಹೊಟ್ಟೆ ತುಂಬ ಊಟ ಮಾಡಬೇಕೆಂದು ಕನಸು ಕಾಣುತ್ತಾರೆ. ಆದರೆ ಭತ್ತ ಅವರ ಶ್ರಮದ ಪ್ರತಿಫಲವಾಗಿ ತಮ್ಮ ಮನೆ ಸೇರಿದರೂ ಅದು ಅವರ ಮನೆಯಲ್ಲಿ ಉಳಿಯದೆ ಊರ ಒಡೆಯರ ಮನೆಯಲ್ಲಿ ಜೋಪಾನವಾಗಿ ಕುಳಿತಿರುತ್ತದೆ. ಊರ ಕೇರಿಯ ಪಕ್ಕದ ಭೂಮಿಯಲ್ಲಿ ಬೆಳೆದ ಭತ್ತವನ್ನು ಸರಕಾರ ವಶಪಡಿಸಿಕೊಂಡು ಆ ಊರಿನ ದಲಿತರಿಗೆ ಅದನ್ನು ಕೊಯ್ದು ರಾಶಿ ಮಾಡಿ ಕೂಲಿಯಾಗಿ ಭತ್ತವನ್ನು ಕೊಡಲಾಗಿರುತ್ತದೆ. ಆದರೆ ಊರ ಒಡೆಯರು ಮತ್ತು ಮೇಲ್ಜಾತಿಯ ಕೆಲವು ಮುಖಂಡರು ಜಿಲ್ಲಾಧಿಕಾರಿಗಳಿಗೆ ತಹಶೀಲ್ದಾರರು ದಲಿತನಾಗಿರುವುದರಿಂದ ತಮ್ಮ ಕೇರಿಯ ಜನರ ಮೇಲಿನ ಪ್ರೀತಿಯಿಂದ ಭತ್ತವನ್ನು ಅವರಿಗೆ ವಶಪಡಿಸಿಕೊಟ್ಟಿದ್ದಾರೆ ಎಂದು ದೂರು ನೀಡಿದಾಗ ಜಿಲ್ಲಾಧಿಕಾರಿ ವಿಚಾರಣೆ ಮಾಡಿ ತಹಶೀಲ್ದಾರನನ್ನು ತರಾಟೆಗೆ ತೆಗೆದುಕೊಳ್ಳುತ್ತಾರೆ. ಇದರಿಂದ ಕಳುವು ಮಾಡಿ ಭತ್ತವನ್ನು ದಲಿತರು ಸಂಗ್ರಹಿಸಿದ್ದಾರೆ ಎಂದು ಪೊಲೀಸರಿಗೆ

ದೂರು ನೀಡಿ ಆ ಊರಿನ ದಲಿತರ ಮನೆಗಳಲ್ಲಿರುವ ಎಲ್ಲಾ ಭತ್ತವನ್ನು ವಶಪಡಿಸಿಕೊಳ್ಳಲು ಆದೇಶಿಸಲಾಗುತ್ತದೆ. ಈ ವಿಷಯ ತಿಳಿದ ತೋಪಮ್ಮ ಸಿಪ್ಪೆಯ ಸಮೇತ ದೊಡ್ಡ ಪಾತ್ರೆಗೆ ಹಾಕಿ ಕುದಿಸಲು ಇಡುತ್ತಾಳೆ. ಆದರೂ ಸಹಿತ ಆ ಭತ್ತ ತೋಪಮ್ಮನ ಹಸಿವನ್ನು ಹಿಂಗಿಸದೆ ಮೇಲ್ಜಾತಿಯ ಒಡೆಯರ ಮಕ್ಕಳ ಮತ್ತು ಪೊಲೀಸರ ಕಾಲ್ತುಳಿತಕ್ಕೆ ಚೆಲ್ಲಾಡಿ ಮಣ್ಣಿನಲ್ಲಿ ಮಣ್ಣಾಗಿ ಹೋಗುತ್ತದೆ. ಅಷ್ಟಕ್ಕೆ ಈ ಕೇರಿಯ ಜನರನ್ನು ಬಿಡದೆ ಬಂದ ಪೊಲೀಸರು ಇವರ ಮೇಲೆ ಕಳುವಿನ ಕೇಸು ಹಾಕಿ ಇವರನ್ನು ಜೈಲಿನಲ್ಲಿ ಹಾಕಲಾಗುತ್ತದೆ. ಅಲ್ಲಿಯೂ ಕೂಡ ಅವರು ಹಸಿವಿನಿಂದ ನರಳುವ ಹಾಗೆ ಆಗುತ್ತದೆ. ಹೀಗೆ ಭತ್ತದಿಂದ ಇವರ ಹೊಟ್ಟೆ ತುಂಬದೆ ಮತ್ತೆ ಅವರಿಗೆ ಕೆಲವು ಪ್ರಾಣಿಗಳ ಎಲುಬು, ಮಾಂಸದ ತುಣುಕುಗಳೇ ಗತಿಯಾಗುತ್ತವೆ.

ಈ ರೀತಿಯಾಗಿ ಈ ಕಥೆಯಲ್ಲಿ ಮೊಗಳ್ಳಿಯವರು ಒಬ್ಬ ದಲಿತ ಬದುಕಿನ ಹಿನ್ನೆಲೆಯ ಲೇಖಕರಾಗಿ ದಲಿತರ ಹಸಿವು ಎಷ್ಟು ಕ್ರೂರವಾಗಿ ಅವರನ್ನು ಬಲಿ ತೆಗೆದುಕೊಳ್ಳುತ್ತದೆ ಎಂಬುದನ್ನು ಮತ್ತು ವ್ಯವಸ್ಥೆಯ ಕ್ರೌರ್ಯವನ್ನು ಪ್ರತಿಬಿಂಬಿಸುತ್ತಾರೆ. ಊರ ಮೇಲ್ಜಾತಿಯ ಒಡೆಯರು ಮತ್ತು ಶ್ರೀಮಂತರು ಅನ್ಯಾಯವಾಗಿ ಸುಳ್ಳು ದೂರು ನೀಡಿ ಭತ್ತವನ್ನು ತೆಗೆದುಕೊಂಡು ಹೋದರೂ ಸಹಿತ ಕೇರಿಯ ದಲಿತರು ಎಲ್ಲಿಯೂ ಅವರ ವಿರುದ್ಧವಾಗಿ ಪ್ರತಿಭಟನೆ ಮಾಡುವುದಿಲ್ಲ. ಅಸಹಾಯಕರಾಗಿ ಮೂಕವೇದನೆಯನ್ನು ಅನುಭವಿಸುತ್ತಾರೆ. ಇಲ್ಲಿ ಲೇಖಕರು ಕೇರಿಯ ಜನರ ಬಡತನ ಮತ್ತು ಹಸಿವಿನ ಭೀಕರತೆಯನ್ನು ಚಿತ್ರಿಸುತ್ತಾರೆ.

ಇದೇ ತೆರನಾದ ಹಸಿವು ಮತ್ತು ಹಸಿವಿನ ಭೀಕರತೆಯಲ್ಲಿ ಬೆಂದ ದಲಿತರ ಕುಟುಂಬ ಹೇಗೆ ನಾಶವಾಗುತ್ತದೆ ಎಂದು ಮತ್ತೊಂದು ಕಥೆಯಲ್ಲಿ ಚಿತ್ರಿಸುತ್ತಾರೆ. ಈ ಬಡತನದಿಂದ ದಲಿತರ ಸುಖ, ಶಾಂತಿ, ನೆಮ್ಮದಿ ಎಲ್ಲಾ ಹಾಳಾಗಿ ಬರಿ ಅಳು, ಕ್ರೂರತೆ, ಹಸಿವು, ನೋವು, ಅವಮಾನ ಮಾತ್ರ ಅವರ ಪಾಲಿಗೆ ಇರುತ್ತದೆ. ಇಂತಹ ಕಥಾವಸ್ತುವನ್ನು ಒಳಗೊಂಡು ಇವರ 'ಒಂದು ಹಳೆ ಚಡ್ಡಿ' ಎಂಬ ಕಥೆಯನ್ನು ಇಲ್ಲಿ ಗಮನಿಸಬಹುದು. ಈ ಕಥೆಯ ವಸ್ತುವೆ ಬಡತನವಾಗಿರುತ್ತದೆ. ಮನೆಯಲ್ಲಿ ಮದುವೆ ಸಂಭ್ರಮ ನಡೆದಾಗ ನಾಗರಾಜ ಎಂಬ ಯುವಕನ ಮಗ ಸಿನಿಯ ಮೈ ಮೇಲೆ ಮಾನ ಮುಚ್ಚಿಕೊಳ್ಳಲು ಒಂದು ಚಡ್ಡಿಯಿಲ್ಲದೆ ಹಾಗೆ ಓಡಾಡುತ್ತಿರುತ್ತದೆ. ಇದು ತಂದೆಯ ಮತ್ತು ಆ ಮನೆಯ ಮಾನ, ಮತ್ತು ಮರ್ಯಾದೆಗೆ ಕುಂದು ಬಂದು ಮನೆಯಲ್ಲಿ ಕಲಹ ಪ್ರಾರಂಭವಾಗುತ್ತದೆ. ಅವಿಭಕ್ತ ಕುಟುಂಬವಾದ ಈ ಮನೆಯಲ್ಲಿ ದುಡಿದು ತಂದು ಹಾಕುವವರು ಯಾರು ಇಲ್ಲದೆ ಮನೆಯ ಯಜಮಾನ ಮುದುಕ ಎಲ್ಲರನ್ನು ಸುಖವಾಗಿ ಇಡಲು ಅಸಾಧ್ಯವಾಗಿ ಅವರ ಕುಟುಂಬ ಅಸ್ತವ್ಯಸ್ತವಾಗಿರುತ್ತದೆ. ಅದಕ್ಕಾಗಿ ಆಸ್ತಿಯ ಪಾಲು ಕೇಳಿ ನಾಗರಾಜ ಮದುವೆ ಮನೆಯಲ್ಲಿ ಜಗಳಾಡುತ್ತಾನೆ. ತನ್ನ ಮಗ ಸಿನಿಗೆ ಮಾನ ಮುಚ್ಚಿಕೊಳ್ಳಲು ಚಡ್ಡಿ ತಂದುಕೊಡಲು ಆಗಿಲ್ಲ ಎಂದು ಜಗಳಾಡಿ ಮನೆಯ ವಾತಾವರಣವನ್ನು ಹದಗೆಡಿಸುತ್ತಾನೆ. ಇದರಿಂದ ಆ ಕುಟುಂಬದ ಬಡತನ ಯಾವ ಮಟ್ಟದಲ್ಲಿ ಇತ್ತು ಎಂದು ತಿಳಿದು ಬರುತ್ತದೆ. ಇಲ್ಲಿ ಸಿನಿ ಚಡ್ಡಿ ಇಲ್ಲದೆ ಮದುವೆ ಮನೆಯಲ್ಲಿ ತಿರುಗಾಡಿದ್ದರ ಬಗ್ಗೆ ಲೇಖಕರಿಗೆ ಕರುಣೆ ಇದೆ, ಕನಿಕರವಿದೆ. ಆದರೆ ತನ್ನ ಮಗನ ಮಾನ ಮುಚ್ಚಲು ಆಗದೆ ಸೋಮಾರಿಯಾಗಿ ತನ್ನ ಕುಟುಂಬದ ಆರ್ಥಿಕ ಹೊರೆಯನ್ನು ಹೊರದ ಸಿನಿಯ ತಂದೆ ನಾಗರಾಜನ ಮೇಲೆ ಸಿಟ್ಟು ಇರುವುದು ಕಂಡುಬರುತ್ತದೆ. ಅವನು ಒಬ್ಬ ಸೋಮಾರಿ, ಮನೆಯ ಯಜಮಾನನಾದ ತಂದೆಯ ಮಾತು ಕೇಳದೆ ಇಬ್ಬರು ಮೂವರು ಹೆಂಡತಿಯರನ್ನು ಮಾಡಿಕೊಂಡು ಅವನನ್ನು ಸಾಕಲು ಆಗದೆ ಅವರನ್ನು ಬಿಟ್ಟು ಸಿನಿಯ ತಾಯಿ ಸಿದ್ದಿಯ ಜೊತೆಯಲ್ಲಿಯೂ ಸಹ ಸರಿಯಾಗಿ ಬಾಳುವೆ ಮಾಡುವುದಿಲ್ಲ. ಹಾಗೆ ಯಾವುದೊ ರೇಡಿಯೋ ರಿಪೇರಿ ಅಂಗಡಿ ಹಾಕಿಕೊಂಡು ಬಂದ ಹಣದಿಂದ ಮಜ ಮಾಡುತ್ತಾನೆ. ಅದಕ್ಕಾಗಿ ಅವನ ಮೇಲೆ ಲೇಖಕನಿಗೆ ಸಿಟ್ಟಿರುವುದು ಕಂಡುಬರುತ್ತದೆ.

ಹೀಗೆ ಊರ ಕೇರಿಯ ಜನರಿಗೆ ಸರಿಯಾದ ಶಿಕ್ಷಣ, ಸರಿಯಾದ ಉದ್ಯೋಗವಿಲ್ಲದೆ ಮುಗ್ಧ ಅವಿದ್ಯಾವಂತ ದಲಿತ ಯುವಕರು ಹೇಗೆ ಬಡತನದ ಬೇಗೆಯಲ್ಲಿ ಬೆಂದು ತಮ್ಮ ಬಾಳನ್ನು ಹಾಳುಮಾಡಿಕೊಳ್ಳುತ್ತಾರೆ ಎಂದು ಲೇಖಕರು ಈ ಒಂದು ಕಥಾವಸ್ತುವಿನಲ್ಲಿ ಬಡತನ ಮತ್ತು ನಿರುದ್ಯೋಗದ ಸಮಸ್ಯೆಯನ್ನು ಚರ್ಚಿಸುತ್ತಾರೆ.

ತೊಟ್ಟಿಲು ಕಾದಂಬರಿಯಲ್ಲಿ ಹಸಿವು ಮತ್ತು ಬಡತನದ ವಿಷಯಕ್ಕೆ ಸಂಬಂಧಿಸಿದ ಹಾಗೆ ಕಥಾನಕವು ಮುಂದುವರೆಯುತ್ತದೆ. ತಗ್ಗಿನ ಮನೆಯ ಕೇರಿಯ ಜನರಲ್ಲಿ ಇಂತಹ ಒಂದು ಸಮಸ್ಯೆ ಕಂಡುಬರುತ್ತದೆ. ಶತಶತಮಾನಗಳಿಂದ ಬಡತನ ಮತ್ತು ಹಸಿವಿನ ಸಮಸ್ಯೆಗಳಿಂದ ಮುಕ್ತಿ ಹೊಂದದೆ ಅದು ಅವರನ್ನು ಬಿಡದೆ ಅವರಿಗೆ ಅಂಟಿಕೊಂಡಿರುತ್ತದೆ. ಆದರೆ ಮೈಸೂರು ಅರಸರು ದಿಬ್ಬದೂರಿಗೆ ಬಂದಾಗ ಆ ಊರಿನ ದಲಿತರಿಗೆ ಕೆರೆಯ ಮೇಲಿನ ಭೂಮಿ ಸಿಕ್ಕಿರುತ್ತದೆ. ಅದರಲ್ಲಿ ಹಲವಾರು ವಿಧ ವಿಧವಾದ ಬೆಳೆಯನ್ನು ಹಾಕಿ ತಮ್ಮ ಬಡತನ ಮತ್ತು ಹಸಿವನ್ನು ನೀಗಿಸಿಕೊಳ್ಳಲು ಹಾತೊರೆಯುತ್ತಿರುವ ದಲಿತರಿಗೆ ಆ ಬೆಳೆ ಅವರಿಗೆ ಸಿಗದೆ ಹೋಗುತ್ತದೆ. ಆ ಭೂಮಿಯನ್ನು ದಿಬ್ಬದೂರಿನ ದಿಬ್ಬದ ಮನೆಯ ದೊಡ್ಡಪ್ಪ ಅನ್ಯಾಯವಾಗಿ ತನ್ನ ಹೆಸರಿಗೆ ಮಾಡಿಕೊಂಡು ದಲಿತರಿಗೆ ಮೋಸ ಮಾಡುತ್ತಾನೆ. ಅಷ್ಟಕ್ಕೆ ಬಿಡದೆ ಅವರನ್ನು ಪೊಲೀಸರಿಗೆ ಒಪ್ಪಿಸಿ ಹಲವಾರು ರೀತಿಯ ಶಿಕ್ಷೆಗಳನ್ನು ಕೊಡಿಸುತ್ತಾನೆ. ಯಾವುದೊ ಪೂರ್ವಜನ್ಮದ ಪುಣ್ಯದಿಂದ ಜೈಲಿನ ಹೊರಗೆ ಬಂದ ಈ ದಲಿತರು ಹೋರಾಟ ಮಾಡಿ ತಮ್ಮ ಭೂಮಿಯನ್ನು ದಿಬ್ಬದ ಮನೆಯವರಿಂದ ಪಡೆಯುತ್ತಾರೆ. ಆದರೆ ಬ್ಯಾಂಕಿನಿಂದ ಸಾಲ ಪಡೆದು ಬೆಳೆಯನ್ನು ಆ ಭೂಮಿಯಲ್ಲಿ ಬೆಳೆದಿರುವುದರಿಂದ ಅದು ಬ್ಯಾಂಕಿನವರ ಪಾಲಾಗುತ್ತದೆ. ಮತ್ತೆ ಅದೇ ಬಡತನ ಮತ್ತು ಹಸಿವು. ರೈತ ಮತ್ತು ಕೃಷಿ ಕೂಲಿಕಾರ್ಮಿಕರಾದ ದಲಿತರ ಸಮಸ್ಯೆಯಾಗಿ ಕಂಡುಬರುತ್ತದೆ. ಹೀಗೆ ಮೊಗಳ್ಳಿ ಗಣೇಶ್ ಅವರು ಹಲವಾರು ಕಥೆಗಳಲ್ಲಿ ಬಡತನ ಮತ್ತು ಹಸಿವು ಎಂಬ ಎರಡು ಸಾಮಾಜಿಕ ಭೀಕರ ಸಮಸ್ಯೆಗಳನ್ನು ಎತ್ತಿಕೊಂಡು ಅದು ದಲಿತರನ್ನು ಹೇಗೆ ಶೋಷಣೆ ಮಾಡುತ್ತದೆ ಎಂದು ಚಿತ್ರಿಸುತ್ತಾ ಹೋಗುತ್ತಾರೆ. ಅವರ ಹಲವಾರು ಕಥೆಗಳಿಗೆ ಈ ಸಮಸ್ಯೆಗಳು ವಸ್ತುವಾಗಿರುವುದು ಕಂಡುಬರುತ್ತದೆ. ಇಲ್ಲಿ ಬಡತನ ಮತ್ತು ಹಸಿವು ಎಂಬ ಎರಡು ಸಮಸ್ಯೆಗಳು ದಲಿತರಿಗೆ ಯಾಕೆ ಅಂಟಿಕೊಂಡಿದೆ ಎಂದು ಕೇಳಿದರೆ ದಲಿತರು ಅವಿದ್ಯಾವಂತರು, ಅನಾಗರಿಕರು ಅವರು ಇನ್ನುಳಿದ ಯಾವ ಉದ್ಯೋಗವನ್ನು ಮಾಡಲು ಅಸಮರ್ಥರಾಗುತ್ತಾರೆ. ಯಾಕೆಂದರೆ ಶತಶತಮಾನಗಳಿಂದ ಊಳಿಗಮಾನ್ಯ ಪದ್ಧತಿಯಲ್ಲಿ ಊರ ಮೇಲ್ಜಾತಿಯ ಶ್ರೀಮಂತರ ಮನೆಯಲ್ಲಿ ದುಡಿದು ಅವರು ಕೊಟ್ಟ ಅನ್ನವನ್ನು ತಿಂದು ಜೀವನ ಸಾಗಿಸುತ್ತಾರೆ. ಅವರು ಕೊಟ್ಟ ಅನ್ನ ಹೊಟ್ಟೆ ತುಂಬದೆ ಇದ್ದಾಗ ಹಸಿವಿನಿಂದ ಹೀಗೆ ದಲಿತರು ಕಾಲ ಕಳೆಯಬೇಕಾಗುತ್ತದೆ. ದಲಿತರಿಗೂ ವಿದ್ಯಾಭ್ಯಾಸ ಪಡೆಯಲು ಅವಕಾಶವಿದ್ದು ಅವರು ಶಿಕ್ಷಣವಂತರಾದಾಗ ಅವರಿಗೆ ಹೊರಬರಲು ಸಾಧ್ಯ ಎಂದು ಲೇಖಕರು ಇಂತಹ ವಸ್ತುವಿನ ಮೂಲಕ ಅಭಿವ್ಯಕ್ತಿಸುತ್ತಾರೆ. ಹೀಗೆ ಮೊಗಳ್ಳಿಯವರು ಇಂತಹ ಸಮಸ್ಯೆಗಳ ಬಗ್ಗೆ ವಸ್ತುವನ್ನು ಆರಿಸಿಕೊಂಡು ಕಥನಗಳಲ್ಲಿ ಅಭಿವ್ಯಕ್ತಿಸಿರುವ ಕ್ರಮ ಅವರ ದಲಿತ ಬದುಕಿನ ಆಳವಾದ ಅನುಭವದ ವೈಶಾಲ್ಯತೆಯನ್ನು ಸ್ಪಷ್ಟಪಡಿಸುತ್ತದೆ.

ಇಂತಹ ಅನುಭವ ವೈಶಾಲ್ಯದಿಂದ ರಚಿತವಾಗಿರುವ ಅವರ 'ತೊಟ್ಟಿಲು', 'ಭತ್ತ' ಕಥನಗಳು ವರ್ಣವ್ಯವಸ್ಥೆಯ ಭೀಕರತೆಯನ್ನು ಚಿತ್ರಿಸುತ್ತವೆ. ಜಮೀನ್ದಾರಿ ವ್ಯವಸ್ಥೆಯ ಕರಾಳ ಛಾಯೆಯಲ್ಲಿ ಕರಗಿ ಹೋಗಿರುವ ಕೃಷಿಕೂಲಿಕಾರ್ಮಿಕರ ಬದುಕಿನ ಚಿಂತಾಜನಕ ಸ್ಥಿತಿಯನ್ನು ಇಲ್ಲಿನ ಕಥಾವಸ್ತುಗಳು ಒಳಗೊಂಡಿರುವುದು ಗಮನಿಸಬೇಕಾದ ಅಂಶವಾಗಿದೆ. ಎಲ್ಲಿಯವರೆಗೆ ಶ್ರಮಿಕ ವರ್ಗದವರಿಗೆ ಶೋಷಕರನ್ನು ಪ್ರಶ್ನಿಸುವ ಪ್ರತಿಫಲವನ್ನು ಕೇಳಿ ಪಡೆಯುವ ಎದೆಗಾರಿಕೆ ಬರುವುದಿಲ್ಲವೋ ಅಲ್ಲಿಯವರೆಗೆ ಈ ಬಡತನ ಹಸಿವು ಮೌಢ್ಯಗಳು ಶ್ರಮಿಕರನ್ನು ಆಳುತ್ತಿರುತ್ತವೆ ಎಂಬುದಾಗಿ 'ಭತ್ತ' ಕಥೆಯ ವಸ್ತುವು ಸಾಬೀತುಪಡಿಸುತ್ತದೆ. ಇಲ್ಲಿ ದಲಿತ ಸಮುದಾಯದ

ದುಸ್ಥಿತಿಯನ್ನು ನಿಷ್ಠುರವಾಗಿಯೂ ಬಡತನದ ತೀವ್ರತೆಯನ್ನು ಅನುಕಂಪದಿಂದಲೂ ಅಭಿವ್ಯಕ್ತಿಸಲಾಗುತ್ತದೆ. ಈ ಬಗೆಯ ವಸ್ತುವನ್ನು ಕಥನವನ್ನಾಗಿಸುವ ಮೊಗಳ್ಳಿಯವರ ಪ್ರತಿಭೆ ಆಧುನಿಕ ಕನ್ನಡ ಕಥನಕ್ಕೆ ಅಪರೂಪವೆನಿಸುತ್ತದೆ. ಬಡತನದ ಕ್ರೌರ್ಯ ಬದುಕಿನ ಆಧಾರವನ್ನು ಕಳೆದುಕೊಂಡ ದಲಿತರ ಒಡಲಾಳದ ಮನುಷ್ಯ ಸಹಜ ಆಸೆ ಆಕಾಂಕ್ಷೆಗಳನ್ನು ನುಚ್ಚುನೂರಾಗಿಸಿದೆ. ಈ ಕಥನಗಳು ಅಲಕ್ಷಿತ ವರ್ಗದ ಬದುಕಿಗೆ ವಾಸ್ತವದ ಭೀಕರತೆಯ ಚಿತ್ರಣಗಳಾಗಿವೆ.

ಮೊಗಳ್ಳಿಯವರ ಕಥನಗಳಲ್ಲಿ ಶೋಷಣೆ ಹಾಗೂ ಅದಕ್ಕೆ ಪ್ರತಿರೋಧ ಒಟ್ಟೊಟ್ಟಾಗಿ ಮೈದಾಳಿರುವುದನ್ನು ಪ್ರಧಾನವಾಗಿ ಗುರುತಿಸಬಹುದು. ಶತಶತಮಾನಗಳಿಂದಲೂ ದಲಿತರು ಭಾರತೀಯ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯೊಳಗೆ ಅಸ್ಪೃಶ್ಯತೆಯ ಕಾರಣಕ್ಕಾಗಿ ಅನುಭವಿಸಿದ ಶೋಷಣೆಯ ನೋವು, ಅಪಮಾನವನ್ನು ದುರಂತವನ್ನು ಕಟ್ಟಿಕೊಡುವ ಬಗೆ ಕಲಾತ್ಮಕವಾಗಿದೆ. ಎಲ್ಲಿಯೂ ಬಂಡಾಯದ ಲೇಖಕರಂತೆ ಬಂಡೇಳದೆ ವ್ಯವಸ್ಥೆಯ ಕ್ಷುದ್ರತೆಗಳನ್ನು ವೈನೋದಿಕ ರೀತಿಯಲ್ಲಿ ಬೆತ್ತಲುಗೊಳಿಸುವ ಬಗೆ ವಿಶಿಷ್ಟವಾಗಿದೆ. ಲೇಖಕರು ತಾವು ಬಾಲ್ಯದಲ್ಲಿ ಕಂಡುಂಡ ಅನುಭವಗಳನ್ನು ಕಥನಗಳನ್ನಾಗಿಸಿದ್ದಾರೆ. ದಿಬ್ಬದ ಕತ್ತಲಲ್ಲಿ ಇಳಿದು ಎಂಬ ಕಥೆಯಲ್ಲಿ ನಾಗರಾಜ ಎಂಬ ದಲಿತ ವಿದ್ಯಾವಂತ ಮುಗ್ಧಯುವಕ ಮೇಲ್ಜಾತಿಯ ಜನರಿಂದ ಶೋಷಣೆಗೆ ಒಳಗಾದವನು. ಇಲ್ಲಿ ದಲಿತರನ್ನು ಜಾತಿಯ ಹೆಸರಿನಲ್ಲಿ ಶೋಷಣೆ ಮಾಡಲಾಗುತ್ತದೆ. ನಾಗರಾಜನ ತಂದೆ ಜಾತಿ ಕಲಹದಿಂದ ಕೊಲೆಯಾಗಿರುತ್ತಾನೆ. ಇದನ್ನು ವಿರೋಧಿಸಿದ ನಾಗರಾಜ ಊರ ಪೂಜಾರಿಯ ದ್ವೇಷಕ್ಕೆ ಎಡೆಯಾಗಬೇಕಾಗುತ್ತದೆ. ನಾಗರಾಜ ಊರ ದಿಬ್ಬದ ಮೇಲೆ ಇರುವ ದೇವಸ್ಥಾನದ ಹತ್ತಿರ ಹೋಗುವುದು ಪೂಜಾರಿಗೆ ಸರಿಕಾಣಿಸುವುದಿಲ್ಲ. ಎಲ್ಲಿ ತನ್ನ ಅನ್ಯಾಯಗಳು ಬಯಲಿಗೆ ಬರುತ್ತವೆಯೋ ಎಂಬ ಅಂಜಿಕೆ ಪೂಜಾರಿಗೆ ಇರುತ್ತದೆ. ಅದಕ್ಕಾಗಿ ಪೂಜಾರಿ ನಾಗರಾಜನ ತಾಯಿ ಇರವ್ವನಿಗೆ ನಿನ್ನ ಮಗನನ್ನು ದಿಬ್ಬದ ಮೇಲೆ ಕಳಿಸಬೇಡ, ಒಂದು ವೇಳೆ ಕಳಿಸಿದರೆ ದೇವರ ಶಿಕ್ಷೆಗೆ ಒಳಗಾಗಬೇಕಾಗುತ್ತದೆ ಎಂಬ ಬೆದರಿಕೆಯನ್ನು ಹಾಕುತ್ತಾನೆ. ಇದು ಪೂಜಾರಿಯ ಸುಳ್ಳು ಬೆದರಿಕೆ ಎಂದು ತಿಳಿದ ನಾಗರಾಜ ಮತ್ತೆ ದೇವರ ಗುಡಿಯ ಹತ್ತಿರ ಹೋಗುತ್ತಾನೆ. ಕೊನೆಗೆ ಪೂಜಾರಿ ಮತ್ತು ದಲಿತ ಯುವಕ ನಾಗರಾಜನಿಗೆ ಜಗಳವಾಗಿ ಹೊಡೆದಾಟವಾಗಿ ಪೂಜಾರಿ ಕೊಲೆಯಾಗುತ್ತಾನೆ. ಈ ಕೊಲೆಯ ಅಪರಾಧ ನಾಗರಾಜನ ಮೇಲೆ ಬಂದು ನಾಗರಾಜ ಪೂಜಾರಿಯ ಕೊಲೆಯ ಶಿಕ್ಷೆಗೆ ಒಳಗಾಗುತ್ತಾನೆ. ನಾಗರಾಜ ಮೇಲ್ಜಾತಿಯವರು ಕೊಡುವ ಶಿಕ್ಷೆಗೆ ಸಿದ್ಧನಿರುತ್ತಾನೆ. ಆದರೆ ಅವರಲ್ಲಿ ಶತಶತಮಾನಗಳಿಂದ ದಲಿತರನ್ನು ಶೋಷಿಸುತ್ತಾ ಬಂದಿರುವುದನ್ನು ಬಿಡಬೇಕು ಅದನ್ನು ತನ್ನ ಬೆನ್ನಿಗೆ ಕಟ್ಟಿ ಕಳಿಸಬೇಕು ಎಂದು ಅವರಲ್ಲಿ ಕನಿಕರ ಬರುವ ಹಾಗೆ ಬೇಡಿಕೊಳ್ಳುತ್ತಾನೆ. ಇದರಿಂದ ದಲಿತರಿಗೆ ಶೋಷಣೆ ಎನ್ನುವುದು ಎಷ್ಟು ಹೀನವಾದ ಸ್ಥಿತಿಯನ್ನು ತಂದು ಒದಗಿಸುತ್ತದೆ ಎಂದು ತಿಳಿಯುತ್ತದೆ. ನಾಗರಾಜ ಇದರಿಂದ ಮುಕ್ತನಾಗಬಯಸುವುದು ಕಥೆಯ ಧ್ವನಿರಮ್ಯತೆಯನ್ನು ಹೆಚ್ಚಿಸುತ್ತದೆ.

ಹೀಗೆ ಈ ಕಥನದಲ್ಲಿ ದಲಿತರ ಮೇಲೆ ನಡೆಯುವ ಶೋಷಣೆ ಮತ್ತು ಪ್ರತಿರೋಧ ಒಟ್ಟೊಟ್ಟಿಗೆ ಕಂಡುಬರುತ್ತದೆ. ಅದೆ ತರಹ 'ತೊಟ್ಟಿಲು' ಕಾದಂಬರಿಯಲ್ಲಿ ಇಂತಹ ಕಥಾವಸ್ತುವನ್ನು ಕಾಣಲಾಗುತ್ತದೆ. ದಿಬ್ಬದ ಮನೆಯವರು ತಗ್ಗಿನ ಮನೆಯವರ ಮೇಲೆ ಮಾಡುವ ಶೋಷಣೆ ತುಂಬಾ ಕ್ರೂರವಾಗಿ ಕಂಡುಬರುತ್ತದೆ. ಮೈಸೂರು ಅರಸರಿಂದ ಸಹಾಯವಾಗಿ ಪಡೆದ ಭೂಮಿಯನ್ನು ದಲಿತರಿಗೆ ಕೊಡದೆ ಅವರನ್ನು ಪೊಲೀಸರಿಂದ ಹಲವಾರು ರೀತಿಯ ಶಿಕ್ಷೆಗೆ ಒಳಪಡಿಸಲಾಗುತ್ತದೆ. ಪೊಲೀಸರ ವಶದಲ್ಲಿದ್ದ ದಲಿತರಿಗೆ ಮೇಕೆ, ಹೋತು, ಆಡುಗಳಿಂದ ಅವರ ತೊಗಲನ್ನು ಸುಲಿಯಾಗುತ್ತದೆ. ಇಂತಹ ಒಂದು ಭೀಕರವಾದ ಶಿಕ್ಷೆಯನ್ನು ಇವರು ಅನುಭವಿಸಬೇಕಾಗುತ್ತದೆ. ಈ ದಲಿತರ ಮಕ್ಕಳು ಮರಿಗಳು ಹಸಿವಿನಿಂದ ಪರದಾಡಿ ಬೀದಿಯಲ್ಲಿ ಬಿದ್ದ ಮಾಂಸದ ತುಣಕುಗಳನ್ನು ತಿಂದು ತಮ್ಮ

ಹಸಿವನ್ನು ನೀಗಿಸಿಕೊಳ್ಳುತ್ತಿರುತ್ತವೆ. ಹೀಗೆ ದಲಿತರು ಮೇಲ್ಜಾತಿಯ ಮೇಲುವರ್ಗದವರ ಶೋಷಣೆಗೆ ಒಳಗಾಗಿ ಸದಾ ಶೋಷಣೆಯಲ್ಲಿಯ ತಮ್ಮ ಬದುಕನ್ನು ಮುಂದುವರೆಸುವ ಪರಿಸ್ಥಿತಿ ಅವರಿಗೆ ಅನಿವಾರ್ಯವಾಗುತ್ತದೆ. ಈ ನೋವು ಮತ್ತು ಶಿಕ್ಷೆ ಎಂದೆಂದಿಗೂ ಮುಗಿಯಲಾರದೇನೊ ಎನ್ನುವಂತಹ ವಿಷಣ್ಣ ಅಸಾಹಯಕತೆಯು ಈ ಕೃತಿಯಲ್ಲಿ ಸಂವಹನಗೊಳ್ಳುವ ಬಗೆ ಕುತೂಹಲಕಾರಿಯಾಗಿದೆ. ಇಂತಹ ಒಂದು ಕಥಾವಸ್ತುವಿಗೆ ಭಾಷಿಕ ರೂಪು ನೀಡುವಲ್ಲಿನ ಲೇಖಕರ ರೂಪಕಶಕ್ತಿಯು ಅದಮ್ಯವಾಗಿದೆ.

ಈ ರೀತಿಯಾಗಿ ಮೊಗಳ್ಳಿ ಗಣೇಶ್ ಅವರು ದಲಿತ ಜಗತ್ತಿನ ಅನುಭವಗಳನ್ನೆ ಕಥಾವಸ್ತುವನ್ನಾಗಿಸಿಕೊಂಡು ಸಾಹಿತ್ಯಿಕ ರಚನೆಗಳನ್ನು ಮಾಡಿರುವುದು ವಿಶೇಷವಾಗಿದೆ. ಒಬ್ಬ ಸೂಕ್ಷ್ಮ ಸಂವೇದನಾಶೀಲ ಪ್ರತಿಭಾವಂತ ಲೇಖಕ ತನ್ನ ಕಾಲದ ಜೀವವಿರೋಧಿ ನಿಲುವುಗಳನ್ನು, ವ್ಯವಸ್ಥೆಯ ಕ್ರೌರ್ಯವನ್ನು ಚಿತ್ರಿಸುವ ಬಗೆ ಅನುಪಮವಾಗಿದೆ.

ಜಾಗತೀಕರಣದ ಇಂದಿನ ದಿನಮಾನದಲ್ಲಿ ಭಾರತೀಯ ಗ್ರಾಮೀಣ ಜಗತ್ತಿನಲ್ಲಿ ಭಿನ್ನ ಬಗೆಯ ಪ್ರಕ್ರಿಯೆಗಳು ಮನೆಮಾಡತೊಡಗಿವೆ. ಪಾರಂಪರಿಕ ನಂಬಿಕೆಗಳು ಮತ್ತು ಮೌಲ್ಯಗಳು ಕುಸಿಯತೊಡಗಿ ಆಧುನಿಕತೆಯ ಪ್ರವಾಹಕ್ಕೆದುರಾಗಿ ಈಜಲಾಗದೆ; ಆರ್ಥಿಕವಾಗಿಯೂ ನೆಲೆಕಂಡುಕೊಳ್ಳಲಾಗದೆ ಸಂಕಷ್ಟಕ್ಕೆ ಸಿಲುಕಿದ ರೈತಾಪಿ ಜಗತ್ತು ಒಂದೆಡೆಯಾದರೆ ಮತ್ತೊಂದೆಡೆ ಭೂಮಿಯೂ ಇಲ್ಲದ ಊರಿಗೆ ಪ್ರತ್ಯೇಕವಾಗಿ ಕೇರಿಗಳಲ್ಲಿ ವಾಸಿಸುವ ದಲಿತ ಜಗತ್ತು ಮತ್ತೊಂದೆಡೆ ಇದೆ. ಉಳುಮೆ ಮಾಡಲು ಜಮೀನು ಇದ್ದವರ ಸ್ಥಿತಿಯೇ ಕರುಣಾಮಯವಾಗಿರುವಾಗ ಭೂಮಿಯೂ ಇಲ್ಲದ, ಬದುಕಿಗೆ ಯಾವ ಆಧಾರವೂ ಇಲ್ಲದ ಅಸ್ಪೃಶ್ಯರ ಸ್ಥಿತಿಯಂತೂ ವರ್ಣಿಸಲಸದಳವಾದ ಸಂಗತಿ. ಇಂಥಲ್ಲಿ ಸರ್ಕಾರದ ಮೀಸಲಾತಿ ಎನ್ನುವ ಸೌಲಭ್ಯವು ಮರೀಚಿಕೆಯಾಗಿಯೇ ಉಳಿದಿದೆ. ಅಸ್ಪೃಶ್ಯರಿಗೆ ಮಾತ್ರ ಸಿಕ್ಕಬೇಕಾಗಿದ್ದ ಮೀಸಲಾತಿಯನ್ನು ನೂರಾ ಎಂಟು ಜಾತಿಗಳು ಕಬಳಿಸುತ್ತಿರುವುದು ಕೂಡಾ ಸರ್ಕಾರದ ಒಂದು ಬಗೆಯ ವಂಚನೆಯೇ ಆಗಿದೆ. ಇಂಥಲ್ಲಿ ರಾಜಕಾರಣವು ಹಳ್ಳಿಯಿಂದಿಡಿದು ದಿಲ್ಲಿಯವರೆಗೂ ಎಲ್ಲರನ್ನೂ ಎಲ್ಲವನ್ನೂ ತನ್ನ ತೆಕ್ಕೆಗೆ ತೆಗೆದುಕೊಂಡಿದೆ. ರಾಜಕೀಯ ಕಾರಣದಿಂದ ಹಳ್ಳಿಯ ಮುಗ್ದ ವಿದ್ಯಾವಂತ, ಅವಿದ್ಯಾವಂತ ಯುವಕರು ಬಲಿಯಾಗುತ್ತಾ ಬಂದಿರುತ್ತಾರೆ. ಹೀಗೆ ರಾಜಕೀಯ ತಿಕ್ಕಾಟದಲ್ಲಿ ಬಲಿಯಾದ ಮುಗ್ಧ ಅವಿದ್ಯಾವಂತರ ಕಥೆಯಾದ 'ಕೊಂಡ'ದಲ್ಲಿ ಇಂತಹ ವಿಪರ್ಯಾಸವನ್ನು ಕಾಣಬಹುದು. ಹಳ್ಳಿ ಪಟ್ಟಣಗಳಲ್ಲಿ ವಾಸವಾಗಿರುವ ಶ್ರೀಮಂತರು ತಮ್ಮ ತಮ್ಮ ಸ್ವಾರ್ಥಕ್ಕೆ ಇಂತಹ ಮುಗ್ಧ ದಲಿತ ಯುವಕರನ್ನು ಬಲಿತೆಗೆದುಕೊಳ್ಳುತ್ತಾರೆ. ಈ ಕಥೆಯಲ್ಲಿ 'ಗೌಡ' ಎಂಬ ಮೇಲ್ಜಾತಿಯ ಶ್ರೀಮಂತ ಊರ ಕೇರಿಯ ಜನರಿಗೆ ಮೀಸಲಾದ ಊರ ಮುಖಂಡರ ಸೀಟನ್ನು ಅವರಿಗೆ ಸಿಗದೆ ಇರುವ ಹಾಗೆ ಮಾಡಲು ದಲಿತ ಯುವಕರಾದ ಚಿಕ್ಕಣ್ಣ, ಮತ್ತು ರುದ್ರನಿಗೆ ಜಗಳ ಹಚ್ಚಿ ಅವರಿಬ್ಬರಲ್ಲಿ ದ್ವೇಷ ಹುಟ್ಟುವ ಹಾಗೆ ಮಾಡಿ ಅವರಿಬ್ಬರು ಒಬ್ಬರಿಗೊಬ್ಬರು ಹೊಡೆದಾಡಿ ಕೊಂಡದಲ್ಲಿ ಬಿದ್ದು ಪ್ರಾಣ ಬಿಡುವ ಹಾಗೆ ಮಾಡುತ್ತಾನೆ. ಗೌಡನ ಸಂಚು ತಿಳಿಯದ ಈ ಯುವಕರು ತಮ್ಮ ಪ್ರಾಣವನ್ನು ಕಳೆದುಕೊಳ್ಳುತ್ತಾರೆ. ವಿದ್ಯಾವಂತರಾಗಿ ಶಿಕ್ಷಣ ಪಡೆದು ಸರಿ ಯಾವುದು ತಪ್ಪು ಯಾವುದು ಎಂದು ಯೋಚನೆ ಮಾಡುವ ಶಕ್ತಿ ಇಲ್ಲಿಯ ದಲಿತ ಯುವಕರಿಗೆ ಇದ್ದಿದ್ದರೆ ಅವರು ಇಂತಹ ದ್ವೇಷಕ್ಕೆ ಒಳಗಾಗದೆ ಅದರಿಂದ ಪಾರಾಗುತ್ತಿದ್ದರು. ಅವರು ಅವಿದ್ಯಾವಂತರಾಗಿರುವುದರಿಂದ ಹೀಗೆ ಅವರು ಇಂತಹ ಮೋಸ, ವಂಚನೆ, ಸ್ವಾರ್ಥಕ್ಕೆ ಬಲಿಯಾಗಿ ತಮ್ಮ ಪ್ರಾಣವನ್ನು ಕಳೆದುಕೊಳ್ಳುತ್ತಾರೆ. ಪ್ರಸ್ತುತ ಕಥನದಲ್ಲಿ ರಾಜಕಾರಣವು ಸೂಕ್ಷ್ಮವಾಗಿ ತಳಸಮುದಾಯಗಳನ್ನು ಹತ್ತಿಕ್ಕಲು ಬಳಸುವ ಕುತಂತ್ರವನ್ನು ಸೂಕ್ಷ್ಮವಾಗಿ ಅಭಿವ್ಯಕ್ತಿಸಿರುತ್ತಾರೆ.

ಇದೇ ಬಗೆಯಲ್ಲಿ 'ಪ್ರಾಣಿಗಳು' ಎಂಬ ಕಥೆಯಲ್ಲಿ ದಲಿತರು ಊರ ರಾಜಕೀಯ ಕಾರಣದಿಂದ ಗುಂಡೇಗೌಡನ ದಬ್ಬಾಳಿಕೆಗೆ ಒಳಗಾಗುತ್ತಾರೆ. ಮಕ್ಕಳು ಕತ್ತೆಗಳಿಗೆ ಕಟ್ಟಿದ ಟಿನ್ನಿನ ಸಪ್ಪಳದಿಂದ ಆ ಕತ್ತೆಗಳು ಊರಲ್ಲಿ ಓಡಾಡಿ ಕೇರಿಯಲ್ಲಿ ಹಾಯ್ದು ಹೋಗುತ್ತಿದ್ದ ಗುಂಡೇಗೌಡನನ್ನು ಸೈಕಲ್ ಮೇಲಿನಿಂದ ಕೆಡುವುತ್ತವೆ. ಗುಂಡೇಗೌಡನು ತನ್ನ ಪ್ರತಿಸ್ಪರ್ಧಿಯಾದ ಮತ್ತೊಬ್ಬ ಗೌಡನು ಕೇರಿಯ ಜನರಿಗೆ ಬಿಟ್ಟು ತನ್ನನ್ನು ಕೇರಿಯಲ್ಲಿ ಕತ್ತೆಗಳಿಂದ ಬೀಳಿಸುವ ಹಾಗೆ ಮಾಡಿದ್ದಾನೆ ಎಂದು ಆ ಕೇರಿಯ ದಲಿತರನ್ನು ಹೊಡೆಯಲು ತನ್ನ ಕಡೆಯ ಕೆಲವು ದಾಂಡಿಗರನ್ನು ಕಳಿಸುತ್ತಾನೆ. ಆ ದಾಂಡಿಗರ ಕಡೆಯಿಂದ ಈ ಮುಗ್ಧ ಕೇರಿಯ ಜನ ಹೊಡೆತ ತಿನ್ನುವ ಪರಿಸ್ಥಿತಿ ಬರುತ್ತದೆ. ಅಲ್ಲದೆ ಗುಂಡೆಗೌಡನ ತೋಟದ ನೀರನ್ನು ತರುತ್ತಿದ್ದ ದಲಿತರಿಗೆ ಆ ನೀರು ತೆಗೆದುಕೊಂಡು ಹೋಗಲು ತಡೆಯೊಡ್ಡುತ್ತಾನೆ. ಮತ್ತೆ ತನ್ನ ತೋಟದಲ್ಲಿ ಅವರಿಗೆ ಕೆಲಸಕ್ಕೆ ಕರೆಯುವುದಿಲ್ಲ.

ಹೀಗೆ ಈ ಕಥೆಯ ವಸ್ತು ಊರ ಒಳರಾಜಕೀಯದಿಂದಾಗಿ ಪೂರ್ವಾಗ್ರಹ ಪೀಡಿತನಾದ ಬಲಿಷ್ಠನೊಬ್ಬ ದಲಿತರ ಮೇಲೆ ನಡೆಸುವ ಹಲ್ಲೆಯನ್ನು ಒಳಗೊಂಡಿದ್ದು, ಹಾಸ್ಯಮಯವಾಗಿ ಚಿತ್ರಿಸಲಾಗಿದೆ. ಕತ್ತೆಗಳಿಗೆ ಟಿನ್ನು ಕಟ್ಟುವುದು ಆ ಕತ್ತೆಗಳು ಗುಂಡೇಗೌಡನನ್ನು ಬೀಳಿಸುವುದು ಮತ್ತು ಊರ ಕ್ಷುದ್ರ ರಾಜಕೀಯ ಎಲ್ಲವೂ ಕಥೆಯ ಅಂತಿಮ ಪರಿಣಾಮದಲ್ಲಿ ಧ್ವನಿಸುವ ವ್ಯಂಗ ವ್ಯವಸ್ಥೆಯೊಂದನ್ನು ವಿಡಂಬಿಸುವ ಬಗೆ ಅನನ್ಯವಾಗಿದೆ. ಮನುಷ್ಯತ್ವವನ್ನು ಮರೆತು, ಕಾರ್ಯ, ಕಾರಣ, ಸಂಬಂಧಗಳ ತಾರ್ಕಿಕ ಅರಿವನ್ನು ಮಸುಕಾಗಿಸಿಕೊಂಡು ಪ್ರಾಣಿಗಳ ಹಾಗೆ ವರ್ತಿಸುವುದು; ಕತ್ತೆಗಳಿಂದಾದ ಅವಮಾನಕ್ಕೆ ಗುಂಡೇಗೌಡ ದಲಿತರನ್ನು ಗುರಿಯಾಗಿಸಿಕೊಳ್ಳುವುದು ಎಲ್ಲವೂ ಕಥೆಯ ಹಂದರಲ್ಲಿ ವ್ಯವಸ್ಥೆಯೊಂದನ್ನು ಗೇಲಿ ಮಾಡುತ್ತವೆ. ಹೀಗೆ ವರ್ಣವ್ಯವಸ್ಥೆಯ ಮೇಲುಸ್ತರವನ್ನು ದಲಿತ ಜಗತ್ತಿನ ವೈನೋದಿಕ ಕಣ್ಣುಗಳಿಂದ ಅನಾವರಣಗೊಳಿಸುವುದು ಮೊಗಳ್ಳಿಯಂತಹ ಲೇಖಕರಿಂದ ಮಾತ್ರ ಸಾಧ್ಯವೆಂದು ಹೇಳಬಹುದು.

ಮಾರ್ಕ್ಸ್‌ವಾದಿ, ಅಂಬೇಡ್ಕರ್‌ವಾದಿ, ಗಾಂಧಿವಾದಿ ಹೀಗೆ ಯಾವ ಇಸಂಗೂ ಬದ್ಧರಾಗದ, ಅಪ್ಪಟ್ಟ ಮಾನವತಾವಾದಕ್ಕೆ ಬದ್ಧರಾದ ಲೇಖಕರು ದಲಿತ ಜಗತ್ತನ್ನು ಕಲಾತ್ಮಕವಾಗಿ ಅಭಿವ್ಯಕ್ತಿಸುತ್ತಾರೆ. ಮೊಗಳ್ಳಿಯವರ ಕಥನಗಳು ವರ್ಣ, ವರ್ಗವ್ಯವಸ್ಥೆಯ ಸಂಘರ್ಷವನ್ನು ದಲಿತಕೇಂದ್ರಿತ ನೆಲೆಯಲ್ಲಿ ನಿರೂಪಿಸುತ್ತವೆಯೆಂದು ಹೇಳಬಹುದು. 'ತೋಪು', 'ತೊಟ್ಟಿಲು', 'ಬುಗುರಿ', 'ದೊಂಬ', 'ಅನಾದಿ' ಮುಂತಾದ ಕಥಾನಕಗಳು ಅವರ ದಲಿತತ್ವದ ತಾತ್ವಿಕತೆಯಲ್ಲಿ ಅರಳಿದ ಕಲಾಕೃತಿಗಳೆಂದು ಯಾವುದೇ ದ್ವಂದ್ವವಿಲ್ಲದೆ ಹೇಳಬಹುದು.

'ತೋಪು' ಕಥೆಯಲ್ಲಿ ದಲಿತರಿಗೆ ಹೋಟೆಲುಗಳಿಗೆ ಪ್ರವೇಶವಿಲ್ಲದೆ ಹೊರಗಡೆ ನಿಂತು ತಿಂಡಿ ತಿನ್ನಬೇಕಾದ ತಾರತಮ್ಯವನ್ನು ವಿರೋಧಿಸಿ ಸಮಾನತೆಯನ್ನು ಬಯಸಿ ಮಾಡುವ ಹೋರಾಟ ಕಂಡುಬರುತ್ತದೆ. ಇದು ಮುಂದೆ ವರ್ಣ, ವರ್ಗಸಂಘರ್ಷಕ್ಕೆಡೆಮಾಡಿ ವ್ಯವಸ್ಥೆಯ ಕಾವಲಿನ ಪ್ರತೀಕಗಳಾದ ಪೊಲೀಸರ ಪ್ರವೇಶವಾಗಿ ದಲಿತರ ಬದುಕು ಸಂಕಷ್ಟಕ್ಕೀಡಾಗುವುದು ಚಿತ್ರಿತವಾಗಿದೆ. ಅದೇ ತರಹ ದಿಬ್ಬದ ಕತ್ತಲಲ್ಲಿ ಇಳಿದು ಕತೆಯಲ್ಲಿಯು ಕೂಡಾ ನಾಗರಾಜನ ತಂದೆ ವರ್ಣಸಂಘರ್ಷದ ಫಲವಾಗಿ ಕೊಲೆಯಾಗಿರುತ್ತಾನೆ. ಅಲ್ಲದೆ ದಲಿತ ಯುವಕನಾದ ನಾಗರಾಜನನ್ನು ದೇವಸ್ಥಾನದ ಹತ್ತಿರಕ್ಕೆ ಬಿಡುವುದಿಲ್ಲ.

ಇನ್ನು ತೊಟ್ಟಿಲು ಕಾದಂಬರಿಯಲ್ಲಿ ದಿಬ್ಬದೂರಿಗೆ ಆಗಮಿಸಲಿರುವ ಮೈಸೂರು ಅರಸರನ್ನು ಬರಮಾಡಿಕೊಳ್ಳಲು ತಮ್ಮ ತಮಟೆಗಳನ್ನು ಬಾರಿಸಲು ಮುಂದೆ ಬಂದಾಗ ಅವರ ಜಾತಿ ಕೀಳೆಂದು, ಆ ದನದ ತೊಗಲು ಚಪ್ಪಲಿಯ ಸಮಾನ ಎಂದು ಅವರನ್ನು ಅಪಮಾನಿಸಲಾಗುತ್ತದೆ. ಇದು ತಗ್ಗಿನ ಮನೆಗಳಿಗೂ ಮತ್ತು ದಿಬ್ಬದ ಮನೆಗೂ ವರ್ಣಸಂಘರ್ಷವಾಗಲು ಕಾರಣವಾಗುತ್ತದೆ.

ಅದೇ ತರಹ ‘ಬುಗುರಿ’ ಕಥೆಯಲ್ಲಿ ಚೆಲುವನ ಬುಗುರಿ ಮಲದ ಗುಂಡಿಗೆ ಬಿದ್ದ ನೆಪದಿಂದ ಆ ಊರಲ್ಲಿ ಹಲವು ಬಗೆಯ ಸರಣಿ ಘಟನೆಗಳು ನಡೆಯುತ್ತವೆ.

ದಲಿತ ಮಹಿಳೆ ಶತಶತಮಾನಗಳಿಂದಲೂ ಪುರುಷನ ಶೋಷಣೆಗೆ ಒಳಗಾಗಿದ್ದಾಳೆ. ಪುರುಷನ ಅತ್ಯಾಚಾರಕ್ಕೆ ಬಲಿಯಾಗಿ ಅವಳ ಜೀವನಪರ್ಯಂತ ನೋವನ್ನು ಅನುಭವಿಸುತ್ತಾ ಬಂದಿದ್ದಾಳೆ. ಇಂತಹ ದಲಿತ ಮಹಿಳೆಯ ಮೇಲೆ ನಡೆಯುವ ಅತ್ಯಾಚಾರ ಮೊಗಳ್ಳಿಯವರ ಕಥನಗಳಲ್ಲಿ ಹೆಚ್ಚು ಪ್ರತಿಧ್ವನಿಸುವ ವಸ್ತುವಾಗಿದೆ. ಅವರ ಕಥನಗಳಲ್ಲಿ ವೈವಿಧ್ಯಮಯವಾದ ದಲಿತ ಮಹಿಳಾ ಪಾತ್ರಗಳನ್ನು ಕಾಣಬಹುದು. ಲೇಖಕರು ದಲಿತ ಮಹಿಳೆಯನ್ನು ವಸ್ತುವಾಗುಳ್ಳ ಕಥನಗಳಲ್ಲಿ ಹೆಣ್ಣೊಬ್ಬಳ ಸಂಕಟ, ನೋವು ಮತ್ತು ಅತೀವವಾದ ದುಃಖದಿಂದ ಬಿಡುಗಡೆಗೆ ಹಾತೊರೆಯುವ ಪರಿಯನ್ನು ಚಿತ್ರಿಸಿದ್ದಾರೆ.

ಯಾವ ಕಾರಣವೂ ಇಲ್ಲದೆ ಪುರುಷ ಪುರುಷರ ನಡುವಿನ ದ್ವೇಷಕ್ಕೆ ಅಮಾಯಕ ದಲಿತ ಮಹಿಳೆಯರು ಅತ್ಯಾಚಾರಕ್ಕೆ ಒಳಗಾಗುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಇಲ್ಲಿ ‘ಕೊಂಡ’ ಎಂಬ ಕಥೆಯ ವಸ್ತು ಇಂತಹ ಮಹಿಳೆಯ ದಾರುಣ ಚಿತ್ರವನ್ನು ಪ್ರತಿಬಿಂಬಿಸುತ್ತದೆ. ಚಿಕ್ಕಣ್ಣ ಮತ್ತು ರುದ್ರ ಎಂಬ ದಲಿತ ಯುವಕರು ಊರಗೌಡನ ಮಾತು ಕೇಳಿ ದ್ವೇಷಕ್ಕೆ ಒಳಗಾದ ಪರಿಣಾಮ ಚಿಕ್ಕಣ್ಣನ ತಂಗಿ ‘ಸಾವಿತ್ರಿ’ ರುದ್ರನಿಂದ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಇಲ್ಲಿ ಇವಳ ಗೋಳನ್ನು ಯಾರು ಕೇಳದೆ ಇದಕ್ಕೆ ಕಾರಣವೇನೆಂದು ತಿಳಿಯದ ಅವಳ ಸಹೋದರ ‘ಚಿಕ್ಕಣ್ಣ’ ಸಾವಿತ್ರಿಯನ್ನು ಹಿಂಸಿಸುತ್ತಾನೆ. ಇದರಿಂದಾಗಿ ಅವಳು ಜೀವನಪರ್ಯಂತ ದುಃಖದಲ್ಲಿ ಕಾಲಕಳೆಯುವಂತಾಗುತ್ತದೆ.

ಇನ್ನು ಇದೆ ತರಹ ಮುಗ್ಧ ದಲಿತ ಹುಡುಗಿ ಅತ್ಯಾಚಾರಕ್ಕೆ ಒಳಗಾಗಿ ತನ್ನ ಪ್ರಾಣವನ್ನು ಬಲಿಕೊಟ್ಟಿರುವ ಪ್ರಸಂಗಗಳು ‘ತೊಟ್ಟಿಲು’ ಮತ್ತು ‘ಅನಾದಿ’ ಕಾದಂಬರಿಗಳಲ್ಲಿ ಬರುತ್ತವೆ. ‘ಮೂಕಿ’ ಎಂಬ ದಲಿತ ಮಹಿಳೆಯ ಮೇಲೆ ದಿಬ್ಬದ ಮನೆಯ ಶ್ರೀಮಂತ ಅತ್ಯಾಚಾರ ಮಾಡಿ ಅವಳ ಕಣ್ಣೀರನ್ನೂ ಒರಸದೆ ಎದ್ದು ಬರುವಾಗ ಮೂಕಿಯ ಗೋಳನ್ನು ನೋಡದೆ ತಂದು ಅವಳನ್ನು ತನ್ನ ದಿಬ್ಬದ ಮನೆಯಲ್ಲಿ ಕೂಲಿ ಜೀತದಾಳಿಗಿಂತಲೂ ಕಡೆಯ ಸ್ಥಾನದಲ್ಲಿ ಅವಳನ್ನು ನೋಡಿಕೊಳ್ಳಲಾಗುತ್ತದೆ. ಆದರೆ ಅವಳ ವ್ಯಕ್ತಿತ್ವಕ್ಕೆ ಮಣಿದ ದಿಬ್ಬದ ಮನೆಯ ಎಲ್ಲ ಸದಸ್ಯರು ಅವಳನ್ನು ಪ್ರೀತಿಯಿಂದ ನೋಡುತ್ತಾರೆ. ಆದರೆ ಅವಳಿಗೆ ಅವಳ ನೋವಿಗೆ ಯಾರು ಸ್ಪಂದಿಸುವುದಿಲ್ಲ.

ಅದೇ ತರಹ ಅನಾದಿ ಕಾದಂಬರಿಯಲ್ಲಿ ಅಮಾಸೆ ಮತ್ತು ಲಕ್ಷ್ಮಮ್ಮನ ಮಗಳು ರೇವತಿ ಎಂಬ ಮುಗ್ಧ ಬಾಲಕಿ ಆ ಊರಿನ ಕಿಡಿಗೇಡಿಗಳಿಂದ ಅತ್ಯಾರಕ್ಕೆ ಒಳಗಾಗಿ ಅವರಿಂದ ಕೊಲೆಯಾಗುತ್ತಾಳೆ. ಈ ಹೆಣ್ಣುಮಕ್ಕಳು ದಲಿತರು ಎನ್ನುವ ಕಾರಣಕ್ಕಾಗಿಯೇ ಈ ಬಗೆಯ ಕ್ರೌರ್ಯಕ್ಕೆ ತುತ್ತಾಗಬೇಕಾದ ಅನಿವಾರ್ಯತೆ ಏರ್ಪಟ್ಟಿರುವುದನ್ನು ಕಾಣಬಹುದು. ಇಂತಹ ಅನ್ಯಾಯಕ್ಕೆ ಯಾವ ಬಗೆಯ ಶಿಕ್ಷೆಯಾಗಲಿ ಸೇಡಿನ ಕ್ರಮವಾಗಲಿ ಇಲ್ಲದೆ ಮೌನವಾಗಿ ಕಾಲದ ಮರೆಯಲ್ಲಿ ಸರಿದುಹೋಗುವ ಜೀವಗಳಿವು.

ಆದರೆ ಇದಕ್ಕೆ ಭಿನ್ನವಾಗಿ ಮೊಗಳ್ಳಿಯವರ ‘ಕೋಮಲಕಾಯ’ ಮತ್ತು ‘ಆ ಹೆಂಗಸು’ ದಲಿತ ಮಹಿಳೆಯನ್ನು ವಸ್ತುವಾಗಿಸಿಕೊಂಡು ಮೇಲಿನ ಕಥನಗಳಿಗಿಂತ ಭಿನ್ನವಾಗಿ ಚಿತ್ರಿಸಿದ್ದಾರೆ. ಕೋಮಲಕಾಯ ಕಥೆಯಲ್ಲಿ ಸ್ಕೂಲ್ ಮಾಸ್ತರನಿಂದ ಅತ್ಯಾಚಾರಕ್ಕೆ ಒಳಗಾದ ಸಾವಿತ್ರಿಯು ಕೊಲೆಯಾದಾಗ ಅವಳ ತಾಯಿ ಆ ಮಾಸ್ತರನನ್ನು ಕೊಲೆ ಮಾಡಿ ಯಾರಿಗೂ ಹೇಳದೆ ಅವನ ಮೇಲೆ ಸೇಡು ತೀರಿಸಿಕೊಂಡು ತನ್ನನ್ನು ತಾನು ರಕ್ಷಿಸಿಕೊಳ್ಳಲು ಹುಚ್ಚಿಯ ಹಾಗೆ ನಟನೆ ಮಾಡುತ್ತಾಳೆ. ಇಲ್ಲಿ ಅವಳ ಪ್ರತಿಭಟನೆ, ಸೇಡು, ಆಕ್ರೋಶ ಕಂಡುಬರುತ್ತದೆ.

ಇನ್ನು 'ಆ ಹೆಂಗಸು' ಎನ್ನುವ ಕಥೆಯು ದಲಿತ ಹೆಣ್ಣೊಬ್ಬಳ ಲೈಂಗಿಕ ಶೋಷಣೆಯ ವಿರುದ್ಧದ ಹೋರಾಟವನ್ನು ವಸ್ತುವನ್ನಾಗಿ ಒಳಗೊಂಡಿದೆ. ಗಂಡನಿಲ್ಲದಿರುವ ಒಬ್ಬ ದಲಿತ ಮಹಿಳೆ ಊರಲ್ಲಿ ಒಂಟಿಯಾಗಿ ಬಾಳುವೆ ಮಾಡುವುದೇ ಕಷ್ಟಕರ ಸಂಗತಿ. ಅವಳು ಯಾರಾದರೊಬ್ಬರಿಗೆ ತನ್ನನ್ನು ಅರ್ಪಿಸಿಕೊಳ್ಳಬೇಕು ಎನ್ನುವಂತಹ ಅನಿವಾರ್ಯ ಪರಿಸ್ಥಿತಿಯನ್ನು ಸೃಷ್ಟಿಸಲಾಗುತ್ತದೆ. ಇಲ್ಲಿ 'ಕೆಂಪಿ' ಗಂಡನಿಲ್ಲದವಳು. ಅದಕ್ಕಾಗಿ ಊರಿನ ಹಲವಾರು ಪುರುಷರು ಅವಳ ಮೇಲೆ ಕಣ್ಣಿಟ್ಟಿರುತ್ತಾರೆ. ಇಲ್ಲಿ ತನ್ನನ್ನು ತಾನು ರಕ್ಷಿಸಿಕೊಳ್ಳಲು 'ಕೆಂಪಿ' ತನ್ನನ್ನು ಕೂಡಲು ಬಂದವರ ಮರ್ಮಾವಯವಕ್ಕೆ ಭಯಾನಕ ತುರಿಕೆ ಬರಿಸುವಂತ ಯಾವುದೋ ಎಣ್ಣೆಯ ತರಹದ ಲೇಪನವನ್ನು ಹಚ್ಚಿ ಜೀವನಮಾನದಲ್ಲಿ ಮತ್ತೆಂದೂ ಅಂತಹ ಪುರುಷರು ತನ್ನೆಡೆಗೆ ಸುಳಿಯದ ಹಾಗೆ ಮಾಡಿಬಿಡುತ್ತಾಳೆ. ಈ ಕಥೆಯ ವಸ್ತು ಭಿನ್ನವಾಗಿದ್ದು ದಲಿತ ಮಹಿಳೆಯೊಬ್ಬಳ ಎದೆಗಾರಿಕೆಯನ್ನು ಮತ್ತು ವಿಕೃತ ವ್ಯವಸ್ಥೆಯ ವಿರುದ್ಧದ ಜಾಣತನದ ತಂತ್ರ, ಪ್ರತಿರೋಧ ಮತ್ತು ಸೇಡು ತೀರಿಸಿಕೊಳ್ಳುವುದನ್ನು ಒಳಗೊಂಡಿದೆ.

**೩.೨ ನಿರೂಪಣೆ**

ಮೊಗಳ್ಳಿ ಗಣೇಶ್‌ರವರ ಕಥನಗಳಲ್ಲಿ ದಲಿತ ಸಂವೇದನೆಯನ್ನು ನಿರೂಪಣೆಯ ಹಿನ್ನೆಲೆಯಲ್ಲಿ ನೋಡುವುದಕ್ಕಿಂತ ಮುಂಚಿತವಾಗಿ 'ನಿರೂಪಣೆ' ಎಂದರೇನು? ಎಂದು ಸಂಕ್ಷಿಪ್ತವಾಗಿ ತಿಳಿಯುವುದಾಗಿದೆ. "ಕಥಾ ನಿರೂಪಣೆ ಎಂದರೆ ಕಥಾ ನಿರೂಪಣೆಯನ್ನು ಇಂಗ್ಲಿಷಿನಲ್ಲಿ 'Narration' ಎಂದು ಕರೆಯಲಾಗುತ್ತದೆ. ಈ ಪದ ಗುಣವಾಚಕವಾಗಿ ಬಳಕೆಯಾಗುತ್ತದೆ. ಇದು ಲ್ಯಾಟಿನ್ ಭಾಷೆಯ ಹೇಳು ಎಂಬ ಅರ್ಥದಿಂದ ರೂಪಿತವಾಗಿದೆ. 'ನಿರೂಪಣೆ' ಎಂಬ ಪದವನ್ನು 'ನೆರೇಟಿವ್'ಗೆ ಸಮನಾರ್ಥಕವಾಗಿ ಬಳಸುತ್ತಾರೆ. ನಿರೂಪಣೆ ಒಂದು ಅಥವ ಹೆಚ್ಚು ಘಟನೆ ಅಥವ ಸಂಗತಿಗಳನ್ನು ಹೇಳುತ್ತದೆ. ಮತ್ತು ಅವುಗಳ ನಡುವೆ ಸಂಬಂಧ ಸ್ಥಾಪಿಸುತ್ತದೆ. ಲೇಖಕ ತನ್ನದೇ ಧ್ವನಿಯಲ್ಲಿ ತಾನೇ ನಿರೂಪಿಸುತ್ತ ಹೋಗುವುದು ನಿರೂಪಣೆಯಾಗಿರುವುದು ಕಂಡುಬರುತ್ತದೆ. ಇಲ್ಲಿ ನಿರೂಪಕನೆ ಒಂದು ಪಾತ್ರವಾಗಬಹುದು. ಇಲ್ಲಿ ಕಥೆಗಳಲ್ಲಿ ಹಲವಾರು ಪಾತ್ರಗಳನ್ನು ಸೃಷ್ಟಿಮಾಡಿ ಅವುಗಳನ್ನು ಮಾತನಾಡಿಸುತ್ತಾ ಕಥೆಯನ್ನು ಹೆಣೆಯಬಹುದು. ಇದನ್ನು ನಿರೂಪಣೆ ಎಂದು ಕರೆಯಲಾಗುತ್ತದೆ. ಇದರ ಲಕ್ಷಣಗಳನ್ನು ಹೀಗೆ ಗುರುತಿಸಬಹುದು. ಕೃತಿಯ ತಿರುಳಿನ (ಕಂಟೆಂಟ್) ಅಂಶ - ಅಂದರೆ ಕೃತಿಯ ವಿಷಯವಾದ ಘಟನೆ, ಸಂಗತಿಗಳನ್ನು ವ್ಯವಸ್ಥೆಗೊಳಿಸುವುದು, ಕೂಡಿಸುವ, ಸಂಬಂಧ ಸ್ಥಾಪಿಸುವ ಅಂಶ: ಮತ್ತೊಂದು ಲೇಖಕನ ತಂತ್ರದ ಅಂಶ - ಅಂದರೆ ಓದುಗರಿಗೆ ಹೇಳುವುದನ್ನು ಹೇಗೆ ಹೇಳಬೇಕೆಂಬ ಅಂಶ"[೧]. ಈ ಎರಡು ಅಂಶಗಳನ್ನು ಅವರ ಲಕ್ಷಣಗಳಾಗಿ ಗುರುತಿಸಲಾಗುತ್ತದೆ.

ಮೊಗಳ್ಳಿಯವರು ಹಲವು ವಿಧದ ನಿರೂಪಣಾ ವಿಧಾನಗಳ ತಂತ್ರವನ್ನು ಬಳಸಿಕೊಂಡು ಕಥನಗಳನ್ನು ನಿರೂಪಿಸುತ್ತಾರೆ. ನಿರೂಪಕನೆ ಒಂದು ಕಥೆಯ ಸುಪ್ತ ಪಾತ್ರವಾಗಿ, ಇಲ್ಲವೆ ಕೆಲವು ಪರಂಪರೆಯ ಪ್ರತಿನಿಧಿಗಳಾದ ಅಜ್ಜಿಯವರ ಮೂಲಕ ಕಥೆಗಳನ್ನು ಹೇಳಿಸುವ ತಂತ್ರವನ್ನು ಪಾಲಿಸುತ್ತಾರೆ. ಒಂದೊಂದು ಸಂದರ್ಭದಲ್ಲಿ ಕೆಲವು ಪಾತ್ರಗಳನ್ನು ಮಾತನಾಡಿಸಿ ಅವರ ಮಾತುಗಳ ಮೂಲಕ ಕಥೆಯ ಒಳ ತಿರುಳನ್ನು ಬಿಚ್ಚಿಡುತ್ತಾ ಹೋಗುತ್ತಾರೆ. ಹೀಗೆ ಅವರು ನಿರೂಪಿಸುತ್ತಾ ಹೋಗುವಾಗ ತಮ್ಮ ಗಾಢ ಅನುಭವ ಅಂದರೆ ಅವರ ದಲಿತ ಲೋಕ ಅನಾವರಣಗೊಳ್ಳುತ್ತಾ ಸಾಗುತ್ತದೆ. ಇಂತಹ ನಿರೂಪಣಾ ವಿಧಾನಗಳನ್ನು ಲೇಖಕರು ಬಳಸಿಕೊಂಡಿದ್ದಾರೆ.

ಮೊಗಳ್ಳಿಯವರು ಹುಟ್ಟಿನಿಂದ ದಲಿತರಾಗಿರುವುದರಿಂದ ಅವರ ಒಟ್ಟು ಸೃಜನಶೀಲ ವ್ಯಕ್ತಿತ್ವದಲ್ಲಿಯೇ ದಲಿತತ್ವದ ಅಂಶಗಳು ಅಡಗಿರುತ್ತವೆ. ಅದರಿಂದ ಅವರು ತಪ್ಪಿಸಿಕೊಳ್ಳಲು ಅಸಾಧ್ಯವಾಗುತ್ತದೆ. ಹೀಗಿರುವಾಗ ಲೇಖಕರು ತಮ್ಮ ಕಥನಗಳಲ್ಲಿ ನಿರೂಪಕನಾಗಿ ಕಥನದ ಒಂದು ಸುಪ್ತ ಪಾತ್ರವಾಗಿ ಕಥೆಯನ್ನು ಬಿಚ್ಚಿಡುತ್ತಾ

ಹೋಗುತ್ತಾರೆ. ಇಂತಹ ಒಂದು ವಿಶಿಷ್ಟವಾದ ನಿರೂಪಣಾ ವಿಧಾನ ಇವರ ಕಥನಗಳಲ್ಲಿ ಕಂಡುಬರುತ್ತದೆ. ಹಾಗಾಗಿ ಲೇಖಕರು ಅವರು ನಿರೂಪಿಸುತ್ತಿರುವ ದಲಿತ ಜಗತ್ತಿನ ಕಥಾನಕಗಳಲ್ಲಿ ಒಂದು ದಲಿತ ಪಾತ್ರವೇ ಆಗಿರುತ್ತಾರೆ.

'ತೋಪು', 'ಮಿಂಚುಳ', 'ಬಾಡೂಟ', 'ನನ್ನಜ್ಜನಿಗೊಂದಾಸೆಯಿತ್ತು', 'ಬಾಡೂಟ', 'ಕಾಳಿ', 'ತೊಟ್ಟಿಲು', 'ಅನಾದಿ' ಮುಂತಾದ ಕಥನಗಳಲ್ಲಿ ಇಂತಹ ಒಂದು ನಿರೂಪಣಾ ವಿಧಾನವನ್ನು ಗುರುತಿಸಲಾಗುತ್ತದೆ. 'ತೋಪು' ಕಥೆಯಲ್ಲಿ ಕೇರಿಯ ಒಬ್ಬ ಅಜ್ಜಿಯ ಮೊಮ್ಮಗನಾಗಿ ತೋಪಿನ ಮಧ್ಯ ಬೆಳೆದ ಒಂದು ದಲಿತ ಪಾತ್ರ ಕಥೆಯ ನಿರೂಪಕನಾಗಿರುತ್ತಾನೆ. ಅಲ್ಲಲ್ಲಿ ನಾನು ಎಂದು ಲೇಖಕ ಕಥೆಯನ್ನು ನಿರೂಪಿಸುತ್ತಾರೆ. ಇಂತಹ ಪಾತ್ರದಲ್ಲಿ ಸಂಪೂರ್ಣ ದಲಿತ ಸಂಸ್ಕೃತಿಯನ್ನು ತಿಳಿಯಲಾಗುತ್ತದೆ. ಈ ಕಥನದಲ್ಲಿ ಕೇರಿಯ ಯುವಕ ಸಂಘದ ಸದಸ್ಯನಾಗಿರುವುದು ಈ ಸಂಘದ ಯುವಕರ ಜೊತೆ ಮುಂದಾಳತ್ವ ವಹಿಸಿ ಊರ ತಾಯವ್ವನ ಹೋಟೆಲಿಗೆ ಪ್ರವೇಶ ಪಡೆಯಲು ಹೋರಾಟ ಮಾಡುತ್ತಾನೆ. ಆದರೂ ಅದು ಅಸಹಾಯಕತೆಯಿಂದ ಕೊನೆಗೊಳ್ಳುತ್ತದೆ. ತಾಯವ್ವನ ಹೋಟೆಲಿಗೇನೊ ಪ್ರವೇಶ ಪಡೆಯಲು ಯಶಸ್ವಿಯಾದರೂ ಊರ ಸುಬ್ಬೇಗೌಡನ ದಬ್ಬಾಳಿಕೆಯಿಂದ ಪೊಲೀಸ್‌ಸ್ಟೇಷನ್ನಿಗೆ ಹೋಗಿ ಅಪರಾಧಿಯಾಗುತ್ತಾನೆ. ಕೊನೆಗೆ ಈ ಕಥೆಯು ಮುಗಿಯುವವರೆಗೆ ನಿರೂಪಕ ಪ್ರಮುಖ ಪಾತ್ರವಾಗಿರುತ್ತಾನೆ. ಈ ಹಳ್ಳಿಯ ಸಂಬಂಧ ಬೇಡ ಎಂದು ಪಟ್ಟಣದಲ್ಲಿ ತನ್ನ ಓದನ್ನು ಮುಂದುವರಿಸುತ್ತಾನೆ. ಆದರೆ ತೋಪನ್ನು ಊರ ಗೌಡ ನಾಶಮಾಡಿ ಅವುಗಳನ್ನು ತನ್ನ ಮಕ್ಕಳ ಕಂಪನಿಗಳಿಗೆ ಸಾಗಿಸುವಾಗ ಲೇಖಕನ ಕರುಳು ಕಿತ್ತಿದ ಹಾಗಾಗುತ್ತದೆ. ಅಸಹಾಯಕತೆಯಿಂದ ತನ್ನ ಪೂರ್ವಿಕರು ಹಚ್ಚಿದ ತೋಪು ನಾಶವಾಗುವುದನ್ನು ನೋಡಿಕೊಂಡು ಸುಮ್ಮನಿರುತ್ತಾನೆ. ಹೀಗೆ ಈ ಕಥನದಲ್ಲಿ ನಿರೂಪಕ ಒಬ್ಬ ಸುಪ್ತ ಚೇತನದಂತೆ ತನ್ನ ದಲಿತ ಜಗತ್ತಿನ ಸಂಕಥನಗಳನ್ನು ಬಿಚ್ಚಿಡುತ್ತಾನೆ.

ಇನ್ನು ಮಿಂಚುಳ ಎಂಬ ಕಥೆಯು ಕೂಡ ಇಂತಹುದೇ ನಿರೂಪಣಾ ವಿಧಾನವನ್ನು ಒಳಗೊಂಡಿದೆ. ಪ್ರತಿಯೊಬ್ಬ ದಲಿತ ಬಾಲಕನು ಅವನು ಸತ್ತ ಮೇಲೆ ಒಂದೊಂದು ಮಿಂಚುಳವಾಗಿ ಹುಟ್ಟಿಬಂದು ಜೀವನ ಮಾಡುತ್ತಾರೆ ಎಂದು ಅಜ್ಜಿಯ ಮೂಲಕ ತಿಳಿಯುತ್ತಾನೆ. ಇಲ್ಲಿ ಸಹ ಲೇಖಕ ನಿರೂಪಕನಾಗಿ ತನ್ನ ಅನುಭವ ಕಥನವನ್ನು ನಿರೂಪಿಸುತ್ತಾ ಹೋಗುತ್ತಾನೆ.

ಅದೇ ತರಹ 'ಬಾಡೂಟ', 'ನನ್ನಜ್ಜನಿಗೊಂದಾಸೆಯಿತ್ತು', 'ಕಾಳಿ' ಎಂಬ ಮೂರು ಕಥನಗಳಲ್ಲಿ ಒಂದು ಪಾತ್ರವಾಗಿ ದಲಿತ ಜಗತ್ತನ್ನು ನಿರೂಪಿಸುತ್ತಾ ಹೋಗುತ್ತಾರೆ.

'ಬಾಡೂಟ'ದಲ್ಲಿ ತಾನು ಚಿಕ್ಕವನಿರಬೇಕಾದರೆ ದಲಿತರು ಪ್ರತಿದಿನದ ಹೊಟ್ಟೆ ಹಸಿವನ್ನು ನೀಗಿಸಿಕೊಳ್ಳಲು ಹೇಗೆ ಪರದಾಟ ಮಾಡಬೇಕಾಗಿತ್ತು, ಅವರಿಗೆ ಬಾಡೂಟ ಎಂಬುದು ಎಷ್ಟು ಮುಖ್ಯವಾಗಿರುವುದು ಎಂಬುದನ್ನು ನಿರೂಪಕರ ನಿರೂಪಣೆಯ ಮೂಲಕ ತಿಳಿದುಬರುತ್ತದೆ. ಈ ಕಥೆಯಲ್ಲಿ ಹಸಿವಿನ ಕುರಿತಾದ ವಸ್ತುವು ಮತ್ತು ಅದಕ್ಕೆ ತಕ್ಕಂತೆ ಲೇಖಕರ ನಿರೂಪಣೆಯು ಅರ್ಥಪೂರ್ಣವಾಗಿ ಒಡಮೂಡಿದೆ.

ಇನ್ನು ನನ್ನಜ್ಜನಿಗೊಂದಾಸೆಯಿತ್ತು ಎಂಬ ಕಥೆಯಲ್ಲಿಯೂ ಸಹ ಲೇಖಕರು ಮುಖ್ಯವಾದ ಪಾತ್ರವಾಗಿರುವುದನ್ನು ಕಾಣಬಹುದು. ಮೊಗಳ್ಳಿಯವರು ನಿರೂಪಕರಾಗಿರುವ ಕಥನಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸುತ್ತಾರೆ. ಮೂರು ತಲೆಮಾರುಗಳ ಕಥನವನ್ನು ಸಣ್ಣಕಥೆಯೊಂದರ ಮೂಲಕ ಅಭಿವ್ಯಕ್ತಿಸಲಾಗಿದೆ. ಈ ಕಥೆಯಲ್ಲಿ ಮೊಗಳ್ಳಿಯವರ ಕಥನ ಪ್ರತಿಭೆಯು ತನ್ನ ಪರಾಕಾಷ್ಠೆಯನ್ನು ತಲುಪಿದೆಯೆಂದರೆ ತಪ್ಪಾಗಲಾರದು. ಕನ್ನಡದ ಕಾವ್ಯಾತ್ಮಕ ಗದ್ಯದ ಮಾದರಿಯನ್ನು ಇಲ್ಲಿ ಕಾಣಬಹುದಾಗಿದೆ. ಒಟ್ಟಾರೆ ಕನ್ನಡದ ಶ್ರೇಷ್ಠ ಕಥೆಗಳೆಂದು

ಬೆರಳೆಣಿಕೆಯಷ್ಟನ್ನು ಪಟ್ಟಿಮಾಡಬಹುದಾದಲ್ಲಿ ಮೊಗಳ್ಳಿಯವರ ಈ ಕಥೆಯೂ ನಿಸ್ಸಂದೇಹವಾಗಿ ಆ ಸಾಲಿನಲ್ಲಿ ನಿಲ್ಲುತ್ತದೆ.

ತೊಟ್ಟಿಲು ಕಾದಂಬರಿಯು ಪ್ರತಿಯೊಂದು ಸನ್ನಿವೇಶವನ್ನು, ಎಲ್ಲಾ ಬಗೆಯ ಸೂಕ್ಷ್ಮಗಳನ್ನು ಭಾಷಿಕವಾಗಿ ಹಿಡಿದಿಡುವಂಥ ನಿರೂಪಣೆಯನ್ನು ಹೊಂದಿರುತ್ತದೆ. ಇಲ್ಲಿ ಪಾತ್ರಗಳು ಮಾತನಾಡುವುದು ಕಡಿಮೆ. ದಲಿತರ ಮೇಲೆ ನಡೆಯುವ ದೌರ್ಜನ್ಯ, ಇನ್ನೂ ಜೀವಂತವಾಗಿರುವ ಊಳಿಗಮಾನ್ಯ ವ್ಯವಸ್ಥೆಯ ಕ್ರೌರ್ಯ, ಜಮೀನ್ದಾರಿ ಪದ್ಧತಿ, ಬಡತನ, ಹಸಿವು, ದೇವದಾಸಿ ಪದ್ಧತಿ ಮುಂತಾದ ಸಾಮಾಜಿಕ ಸಮಸ್ಯೆಗಳ ಚಿತ್ರಣವನ್ನು ಈ ಕಾದಂಬರಿ ಒಳಗೊಂಡಿದೆ. ದಲಿತ ಜಗತ್ತಿನಿಂದಲೇ ಲೇಖಕರು ಬಂದವರಾದ್ದರಿಂದ ದಲಿತೇತರ ಲೇಖಕರಿಗೆ ನಿರೂಪಿಸಲು ಸಾಧ್ಯವಾಗದ ಅಂಶಗಳನ್ನು ಭಾಷಿಕವಾಗಿ ಹಿಡಿದಿಡುವಲ್ಲಿ ಸಾಧ್ಯವಾಗಿದೆ. ಇದು ಈ ಕಾದಂಬರಿಯಲ್ಲಿ ಅವರ ನಿರೂಪಣೆಯಿಂದ ಮತ್ತಷ್ಟು ಸ್ಪಷ್ಟವಾಗುತ್ತದೆ. ನಿರೂಪಕನು ಶ್ರೇಣೀಕೃತ ಸಮಾಜವನ್ನು ದಿಬ್ಬದ ಮನೆ ಮತ್ತು ತಗ್ಗಿನ ಮನೆ ಎಂದು ವಿಂಗಡಿಸಿರುವುದು ಸಾಂಕೇತಿಕವಾಗಿದೆ. ದಿಬ್ಬದ ಮನೆಗಳವರಿಂದ ತಗ್ಗಿನ ಮನೆಯವರ ಮೇಲೆ ಆಗುವ ಶೋಷಣೆಯನ್ನು ನಿರೂಪಿಸುತ್ತಾ ಹೋಗುತ್ತಾರೆ. ಇಲ್ಲಿ ನಿರೂಪಕನೂ ಸಹ ಒಂದು ಪಾತ್ರವಾಗಿದ್ದಾಗ್ಯೂ ಆ ಎರಡೂ ಏಣಿಶ್ರೇಣಿಗಳ ಮಧ್ಯೆ ನಿಂತು ನಿರ್ಲಿಪ್ತವಾಗಿ ಕಥೆ ನಿರೂಪಿಸುತ್ತಿದ್ದಾರೆನ್ನಿಸುತ್ತದೆ. ಇದು ಒಂದು ಬಗೆಯ ವಿಶಿಷ್ಟ ನಿರೂಪಣಾ ವಿಧಾನವೇ ಆಗಿದೆ. ಅದೇ ರೀತಿಯಲ್ಲಿ 'ಭತ್ತ' ಕಥೆಯಲ್ಲಿಯೂ ಈ ಬಗೆಯ ನಿರೂಪಣಾ ವಿಧಾನವನ್ನು ನೋಡಬಹುದು.

ತೊಟ್ಟಿಲು ಕಾದಂಬರಿಯಲ್ಲಿ ದಲಿತ ಮಹಿಳೆಯಾದ ಮೂಕಿಯ ಮೇಲೆ ದಿಬ್ಬದ ಜಮೀನ್ದಾರನ ಅತ್ಯಾಚಾರದ ಪ್ರತಿಫಲದ ಕೂಸೇ ನಿರೂಪಕನು ಎಂಬ ಅಂಶ ಸ್ಪಷ್ಟವಾಗುತ್ತದೆ. ಇದು ಕಥನ ಮತ್ತು ನಿರೂಪಣೆಯನ್ನು ಪರಿಣಾಮಕಾರಿಯಾಗಿಸುವಲ್ಲಿ ಬಳಸಿಕೊಂಡ ತಂತ್ರವಾಗಿದ್ದಂತಿದೆ. ಇಂತಹ ಹುಟ್ಟಿನ ಸಂದ್ಗಿದತೆಯಿಂದಾಗಿ ನಿರೂಪಕನು ಯಾವ ಕಡೆಗೂ ಸೇರಲಾಗದೆ ಮಧ್ಯದಲ್ಲಿ ನಿಂತು ಕಥೆಯನ್ನು ತೋರುಬೆರಳಿನಿಂದ ತೋರಿಸುತ್ತಾ ಹೋಗುತ್ತಾರೆ. ಎಲ್ಲರೂ ತನ್ನ ಬಂಧುಬಳಗದವರೆ, ಯಾರನ್ನು ಹಿಂಸಿಸುವ ಹಾಗಿಲ್ಲ ದ್ವೇಷಿಸುವ ಹಾಗಿಲ್ಲ. ಯಾರನ್ನೂ ಪ್ರೀತಿಸುವ ಹಾಗಿಲ್ಲ ಎನ್ನುವ ಒಂದು ಸಮತೋಲನದಲ್ಲಿ ಕಥೆಯನ್ನು ನಿರೂಪಿಸುತ್ತಾ ಹೋಗುತ್ತಾರೆ. ಆದರೆ ಈ ನಿರೂಪಕನಿಗೆ ದಿಬ್ಬದ ಮನೆಯ ಕೆಲವು ಜನರ ಮೇಲೆ ಗೌರವವಿರುತ್ತದೆ. ದಿಬ್ಬದ ಮನೆಯ ಹಿರಿ ಅಜ್ಜಿ, ಸಣ್ಣಜ್ಜ, ತಾತ ಮತ್ತು ರೇಡಿಯೊ ಚಿಕ್ಕಪ್ಪ ಅವನ ಹೆಂಡತಿ ವೆಂಕಟಲಕ್ಷ್ಮೀ, ಅವರ ಮಗಳು ಅಶ್ವಿನಿ, ತನ್ನ ತಾಯಿ ಮೂಕಿ ಇವರ ಮೇಲೆ ಗೌರವವಿರುತ್ತದೆ. ಆದರೆ ಇವರ ಕಡೆ ತನ್ನನ್ನು ಸೇರಿಸಿಕೊಳ್ಳುವದಿಲ್ಲ. ಅವನ ಒಲವು ಏನಿದ್ದರೂ ತಗ್ಗಿನ ಮನೆಯ ಜನಗಳ ಕಡೆ. ಮಲ್ಲಿ, ಮಲ್ಲಿಯ ಮಗ ಮದನ, ಬೀಮಪ್ಪ, ದೊಡಿ, ದೊಡ್ಡಯ್ಯ, ತನ್ನ ತಾಯಿ ಮೂಕಿ ಇವರೆಲ್ಲರ ಮೇಲೆ ಕರುಣೆ ಇರುತ್ತದೆ. ಕನಿಕರವಿರುತ್ತದೆ. ಅವರ ಸುಂದರವಾದ ಬದುಕನ್ನು ನೋಡಿ ಕುಶಿ ಪಡುತ್ತಾ ಹೋಗುತ್ತಾನೆ. ಅದೇ ದಿಬ್ಬದ ಮನೆಯ ದೊಡ್ಡಪ್ಪ ಮತ್ತು ತನ್ನ ಹುಟ್ಟಿಗೆ ಕಾರಣನಾದ ಮನುಷ್ಯರನ್ನು ಕಂಡರೆ ಆಗುವುದಿಲ್ಲ. ದೊಡ್ಡಪ್ಪ ತೀರಿಕೊಂಡಾಗಾಗಲಿ, ತನ್ನ ಹುಟ್ಟಿಗೆ ಕಾರಣನಾದವನು ರೋಗದಿಂದ ಬಳಲುವಾಗ ಅವರ ಮೇಲೆ ಒಂದಿಷ್ಟು ಕರುಣೆ ಬರುವುದಿಲ್ಲ. ಇಂತಹ ಸಿಟ್ಟು, ಆಕ್ರೋಶ, ನಿರೂಪಕನಲ್ಲಿ ಕಂಡುಬರುತ್ತದೆ. ದಿಬ್ಬದ ಮನೆ ನಾಶವಾದಾಗ ಆ ಮನೆಯನ್ನು ಬೆಳಗಿಸಲು ಹಿರಿ ಅಜ್ಜ ನಿರೂಪಕನನ್ನು ಎಷ್ಟು ಒತ್ತಾಯಿಸಿದರೂ ಅದಕ್ಕೆ ನಿರೂಪಕ ಒಪ್ಪಿಕೊಳ್ಳುವುದಿಲ್ಲ. ಯಾಕೆಂದರೆ ಅಂತಹ ಜೀವನದ ಬಗೆಗೆ ನಿರೂಪಕರಿಗೆ ಬೇಸರವಾಗಿರುತ್ತದೆ.

ಈ ತೆರನಾದ ಒಂದು ವಿಶಿಷ್ಟ ನಿರೂಪಣಾ ವಿಧಾನ ಮೊಗಳ್ಳಿಯವರ ಕಥನಗಳಲ್ಲಿ ಕಂಡುಬರುತ್ತದೆ. ಇದರಿಂದ ಅವರ ದಲಿತ ಜಗತ್ತು ತನ್ನೆಲ್ಲ ಜೀವನ ಪ್ರೀತಿ ಮತ್ತು ವೈವಿಧ್ಯತೆಗಳಿಂದ ಅನಾವರಣಗೊಳ್ಳುತ್ತಾ ಹೋಗುತ್ತದೆ. ಇನ್ನು ಮೊಗಳ್ಳಿ ಅವರು ಕಥೆಯ ಒಳಗಡೆ ಮತ್ತೊಂದು ಕಥೆಗಳನ್ನು ಹೆಣೆಯುತ್ತಾ ಹೋಗುತ್ತಾರೆ. ಇಂತಹ ಒಂದು ವಿಶಿಷ್ಟವಾದ ನಿರೂಪಣಾ ವಿಧಾನದಿಂದ ದಲಿತ ಜಗತ್ತನ್ನು ಪ್ರತಿಬಿಂಬಿಸುತ್ತಾರೆ. ಪರಂಪರೆಯ

ಪ್ರತಿನಿಧಿಗಳಾದ ಅಜ್ಜ ಅಜ್ಜಿಯವರ ಮೂಲಕ ಕಥನದ ನಿರೂಪಣೆಯನ್ನು ಕೈಗೊಂಡು ಜನಪದೀಯ ಪ್ರೇರಣೆಯ ಕಥೆಗಳನ್ನು ಕೂಡಾ ತಮ್ಮ ಕ್ರಿಯಾತ್ಮಕ ಅಭಿವ್ಯಕ್ತಿಯಲ್ಲಿ ಮೂಸೆಯಲ್ಲಿ ಕರಗಿಸಿ ಕಲಾತ್ಮಕವಾಗಿಸುತ್ತಾರೆ. ಬಹುಶಃ ಇಂಥ ಅಭಿವ್ಯಕ್ತಿ ಕ್ರಮದಿಂದಾಗಿಯೇ ಇವರ ನಿರೂಪಣೆ ವಿಲಕ್ಷಣವಾದ ಮತ್ತು ವಿಶಿಷ್ಟವಾದ ಶೈಲಿಯೊಂದನ್ನು ರೂಢಿಸಿಕೊಂಡಿರಬಹುದೆಂದು ಹೇಳಬಹುದು.

ಉದಾಹರಣೆಗೆ ತೋಪು ಕಥೆಯಲ್ಲಿ ಅಜ್ಜಿ ಕಥೆಯೊಂದನ್ನು ಹೇಳುತ್ತಾಳೆ. ಯಾವ ದಲಿತ ಜನಾಂಗವನ್ನು ಅಪವಿತ್ರವೆಂದು ತಿರಸ್ಕಾರ ಮಾಡಲಾಗಿತ್ತೋ ಅದೆ ದಲಿತ ಜನಾಂಗದ ದಲಿತನ ಮರಣದಿಂದ ಅವನ ದೇಹದಿಂದ ಪತ್ರಿಮರವಾಗಿ ಬೆಳೆದು ಅದೆ ಮರದ ಎಲೆಯನ್ನು ಪವಿತ್ರವೆಂದು ತಿಳಿದು ದೇವರಿಗೆ ಏರಿಸಿ ದೇವರ ಪೂಜೆ ಮಾಡುತ್ತಾರೆ. ಇಲ್ಲಿಯ ಈ ಅಜ್ಜಿಯು ಹೇಳುವ ಪತ್ರೆಮರದ ಕಥೆಯಿಂದ ದಲಿತತ್ವದ ಆಶಯವನ್ನು ಅರಿಯಬಹುದಾಗಿದೆ.

ಇನ್ನು 'ಜೀವ' ಕಥೆಯಲ್ಲಿ 'ಬಿಕ್ಷುಕ'ನ ಕತೆಯನ್ನು ಪಂರಪರೆಯ ಪ್ರತಿನಿಧಿಯಾದ ಅಜ್ಜನು ಹೇಳುತ್ತಾ ಹೋಗುತ್ತಾನೆ. ಆಕಾಶದಲ್ಲಿರುವ ಚುಕ್ಕಿಗಳು ತನ್ನ ಪೂರ್ವಿಕರು ಎಂದು ಕಲ್ಪಿಸಿಕೊಂಡು ಅಲ್ಲಿಯ ಪ್ರತಿಯೊಂದು ಚುಕ್ಕಿಗಳು ದಲಿತರ ಜೀವನವನ್ನು ಪ್ರತಿಬಿಂಬಿಸುತ್ತವೆ ಎಂದು ಹೇಳುತ್ತಾನೆ. ಅದರಲ್ಲಿ ಒಂದು ಚುಕ್ಕಿಯಾದ ಅದು ಬಿಕ್ಷುಕನ ಜೀವ ಎಂದು ಹೇಳುತ್ತಾ ಆ ಬಿಕ್ಷುಕನ ಕತೆಯನ್ನು ನಿರೂಪಿಸಲಾಗುತ್ತದೆ. ಈ ಬಿಕ್ಷುಕ ಮೇಲ್ಜಾತಿಯ ಶ್ರೀಮಂತರ ಮನೆಯ ಹುಡುಗಿಯನ್ನು ಪ್ರೀತಿಸಿ ಅವಳನ್ನು ಮದುವೆಯಾಗಿ ಕದ್ದುಸಂಸಾರ ಮಾಡುವ ಅವನ ಜೀವನವನ್ನು ವಿವರಿಸಲಾಗಿದೆ. ಆರೋಹಣ ಪದ್ಧತಿಯ ವಿವಾಹದಿಂದ ಏನೆಲ್ಲಿ ಅನಾಹುತಗಳಾದರೂ ಆ ಬಿಕ್ಷುಕ ಅವುಗಳನ್ನು ತಡೆದುಕೊಂಡು ಜೀವಿಸುತ್ತಾನೆ. ತನ್ನ ಪ್ರೀತಿಯ ಹುಡುಗಿಯ ಮುಖ ನೋಡಿ ಬಾಳುವೆ ಮಾಡುತ್ತಾನೆ. ಹೀಗೆ ದಲಿತ ಜಗತ್ತಿನ ಆಶಯಗಳನ್ನು ಲೇಖಕರು ನಿರೂಪಿಸುತ್ತಾ ಹೋಗುತ್ತಾರೆ.

**೩.೩ ಕಥಾ ಸಂವಿಧಾನ**

ಮೊಗಳ್ಳಿಯವರ ಕಥಾ ಸಂವಿಧಾನವನ್ನು ಅವರ ತೊಟ್ಟಿಲು ಕಾದಂಬರಿಯ ಕಥಾನಕವನ್ನು ನಿದರ್ಶನವಾಗಿಟ್ಟುಕೊಂಡು ಚರ್ಚಿಸಬಹುದು. ಅವರ ಬಹುತೇಕ ಶ್ರೇಷ್ಠ ಕಥಾನಕಗಳೆಲ್ಲವೂ ವಿಶಿಷ್ಟ ಸಂವಿಧಾನದಿಂದ ಕೂಡಿದವುಗಳಾಗಿವೆ. ತೊಟ್ಟಿಲು ಕಾದಂಬರಿಯ ಕಥಾ ಸಂವಿಧಾನವಂತೂ ಅತ್ಯಂತ ವಿಶಿಷ್ಟವಾಗಿದೆ. ಈ ಕಾದಂಬರಿಯಲ್ಲಿ ಲೇಖಕರು ದಲಿತರ ಬದುಕನ್ನು ದಿಬ್ಬದ ಮನೆ ಮತ್ತು ತಗ್ಗಿನ ಮನೆ ಎಂಬ ಎರಡು ಭಾಗಗಳನ್ನಾಗಿ ಮಾಡಿ ದಲಿತ ಮತ್ತು ದಲಿತೇತರ ಬದುಕಿನ ವೈರುಧ್ಯಗಳನ್ನು ಚಿತ್ರಿಸುತ್ತಾರೆ. ದಿಬ್ಬದ ಮನೆ ಎನ್ನುವುದು ಸಾಮಾಜಿಕ ಸ್ತರದಲ್ಲಿ ಎತ್ತರದಲ್ಲಿರುವುದು. ತಗ್ಗಿನ ಮನೆ ದಲಿತ ಜೀವನದ ಸ್ತರವನ್ನು ಒಳಗೊಂಡಿರುವುದಾಗಿದೆ. ತಗ್ಗಿನ ಮನೆ ಹಸಿವು, ಬಡತನ, ಕ್ರೌರ್ಯಕ್ಕೆ ಒಳಗಾಗುವ ಪ್ರಕ್ಷುಬ್ಧ ಸ್ಥಿತಿಯನ್ನು ವಾಸ್ತವಿಕತೆಯ ತಳಹದಿಯ ಮೇಲೆ ನಿಂತು ನಿರೂಪಕರು ಗುರುತಿಸುತ್ತಾ ಹೋಗುತ್ತಾರೆ.

ದಿಬ್ಬದ ಮನೆಯಾದರೂ ಸಾಮಾಜಿಕ ಸ್ತರದಲ್ಲಿ ಮೇಲುಹಂತದಲ್ಲಿದ್ದಾಗ್ಯೂ ಅಲ್ಲೂ ಮನುಷ್ಯನ ದುರುಂತ, ತೊಳಲಾಟ, ಎಂದೆಂದಿಗೂ ಕೊನೆಗಾಣದ ನೋವು, ಜೀವನ ಪ್ರೀತಿ ಮತ್ತು ಬದುಕಿನ ವೈರುಧ್ಯಗಳನ್ನು ಒಳಗೊಂಡ ಚಿತ್ರಣವನ್ನು ಅತ್ಯಂತ ಸಮರ್ಥವಾಗಿ ಚಿತ್ರಿಸುತ್ತಾರೆ. ತೊಟ್ಟಿಲು ಕಥಾನಕ ಈ ಕಥಾಸಂವಿಧಾನದಿಂದಾಗಿಯೇ ಆತ್ಯಂತಿಕ ಧ್ವನಿ ರಮ್ಯತೆಯನ್ನು ಪಡೆಯುತ್ತದೆ.

ನನ್ನಜ್ಜನಿಗೊಂದಾಸೆಯಿತ್ತು, ಭೂಮಿ, ಪ್ರಾಯ್ಡ್‌ನು ಹೇಳಿದ ಕೊನೆಯ ಕತೆ ಹೀಗೆ ಮೊಗಳ್ಳಿಯವರ ಬಹುಪಾಲು ಕಥೆಗಳು ವಿಶಿಷ್ಟ ಕಥಾಸಂವಿಧಾನದಿಂದ ಕೂಡಿವೆ. ಇಂತಹ ಕಥಾಸಂವಿಧಾನದಿಂದಾಗಿ ದಲಿತ ಬದುಕು ಅತ್ಯಂತ ಪರಿಣಾಮಕಾರಿಯಾಗಿ ಅಭಿವ್ಯಕ್ತಿಗೊಳ್ಳುತ್ತದೆ.

**೩.೪. ಅನುಭವ**

ಅನುಭವಗಳೇ ಲೇಖಕನಿಗೆ ಮೂಲ ಬಂಡವಾಳ. ಪ್ರತಿಯೊಬ್ಬ ಲೇಖಕ ತಾನು ಕಂಡುಂಡ ಜೀವನವನ್ನು ತನ್ನ ಅನುಭವದ ಮೂಸೆಯೊಳಗೆ ಕರಿಗಿಸಿಯೇ ಸಾಹಿತ್ಯಿಕ ರೂಪವನ್ನಾಗಿಸುವುದು. ಇದಕ್ಕೆ ಪೂರಕವಾಗಿ ಪ್ರತಿಭೆ ದುಡಿಯುತ್ತದೆ. ಮೊಗಳ್ಳಿಯವರ ಅನುಭವ ಲೋಕ ತುಂಬಾ ಶ್ರೀಮಂತವಾದದ್ದು. ದೇವನೂರರ ನಂತರ ಅವರಷ್ಟೇ ಸಮರ್ಥವಾಗಿ ದಲಿತಲೋಕವನ್ನು ಅನಾವರಣಗೊಳಿಸಿದವರು ಮೊಗಳ್ಳಿಯವರು. ಇವರ ಕಥನಸಾಹಿತ್ಯವನ್ನು ಅವರ ಅನುಭವ ಕಥನಗಳೆಂದು ಕರೆಯುವುದರಲ್ಲಿ ತಪ್ಪಿಲ್ಲವೇನೊ. ಕನ್ನಡ ಸಾಹಿತ್ಯ ಜಗತ್ತಿಗೆ ಅಪರೂಪವಾದ ಅಪರಿಚಿತವಾದ ಅದೆಷ್ಟೋ ಪಾತ್ರಗಳನ್ನು ತಮ್ಮ ಕಥಾನಕಗಳ ಮೂಲಕ ನೀಡಿದರು. ಉದಾಹರಣೆಗೆ ಅವರ ಅನಾದಿ ಕಾದಂಬರಿಯನ್ನು ಹೆಸರಿಸಬಹುದು. ಅನಾದಿ ಕಾದಂಬರಿಯು ಅಸ್ಪೃಶ್ಯರಿಗೆ ಅಸ್ಪೃಶ್ಯರಾದ ಸಮುದಾಯವೊಂದರ ಜೀವನಾನುಭವವು ಒಡಮೂಡಿದ ಕೃತಿಯಾಗಿದೆ.

ಕನ್ನಡದ ಸಾಹಿತ್ಯಿಕ ಸಂದರ್ಭದಲ್ಲಿ ಮೊಗಳ್ಳಿಯವರಿಗೆ ದೊರೆತಂಥ ಅನುಭವ ಲೋಕ ಬೇರಾವ ಸಾಹಿತಿಗೂ ದಕ್ಕಿರಲಾರದು. ಇಂತಹ ಇವರ ಅನುಭವ ಲೋಕಕ್ಕೆ ಅವರ ಅಗಾಧ ಪ್ರತಿಭೆಯೂ ಜೊತೆಯಾದದ್ದು ಅದೃಷ್ಟವೆಂತಲೇ ಹೇಳಬಹುದು.

**೩.೫. ಭಾಷೆ**

ಮೊಗಳ್ಳಿ ಗಣೇಶ್ ಅವರು ತಮ್ಮ ಕಥನಗಳಲ್ಲಿ ಭಾಷೆಯನ್ನು ತುಂಬಾ ವಿಶಿಷ್ಟವಾಗಿ ಬಳಸಿಕೊಂಡಿದ್ದಾರೆ. ತೀರಾ ಉನ್ನತವಾದ ಭಾಷೆಯನ್ನು ಮತ್ತು ಗ್ರಾಮೀಣ ಭಾಷೆಯನ್ನು ಒಳಗೊಂಡಂತೆ ವಿಶಿಷ್ಟ ಭಾಷೆಯೊಂದನ್ನು ರೂಢಿಸಿಕೊಂಡಿರುತ್ತಾರೆ. ಓದುಗನಿಗೆ ಸಂವಹನವಾಗುವ ಕಾವ್ಯಾತ್ಮಕ ಭಾಷೆ ಇವರದು. ಸೃಷ್ಠಿಶೀಲ ಲೇಖಕನೊಬ್ಬ ತನ್ನ ಅನುಭವಗಳನ್ನು ಭಾಷೆಯಲ್ಲಿ ಕಟ್ಟಿಕೊಡುವಾಗ ರೂಪಕ ಪ್ರತಿಮೆಗಳಿಂದ ಅನುಭವಗಮ್ಯವಾಗುವ ಹಾಗೆ ನಿರೂಪಿಸುತ್ತಾನೆ. ಇವರ ಭಾಷೆ ಮಹಾಕಾವ್ಯದ ಕಾವ್ಯಮಯತೆಯನ್ನೂ ಭಾವಗೀತಾತ್ಮಕತೆಯ ತೀವ್ರತೆಯನ್ನು ಒಳಗೊಂಡು ದೇದಿಪ್ಯಮಾನತೆಯಿಂದ ಕೂಡಿದುದಾಗಿದೆ. ಒಬ್ಬ ಸಮರ್ಥ ಲೇಖಕ ತನ್ನ ಅನುಭವಗಳ ಮೂಲಕ ಭಾಷೆಯ ಎಲ್ಲೆಯನ್ನು ಮೀರಿ ಹೊಸ ಪದಗಳು, ನುಡಿಗಟ್ಟುಗಳನ್ನು ಹುಟ್ಟುಹಾಕುತ್ತಾನೆ. ಹಾಗೆಯೇ ಹೊಸತೊಂದು ಅಭಿವ್ಯಕ್ತಿ ಕ್ರಮ ಮತ್ತು ಹೊಸತನಕ್ಕೆ ನಾಂದಿ ಹಾಡುತ್ತಾನೆ.

ಉದಾಹರಣೆಗೆ ಕಾಲದ ಬಗ್ಗೆ ಅವರ ಹಲವು ವಾಕ್ಯಗಳು

೧. ಕಾಲ ನಮ್ಮನ್ನೆಲ್ಲಾ ಜಗಿಯುತ್ತಿದ್ದಂತೆ ನಮ್ಮ ನೆನ್ನೆಗಳೇ ನಮಗೆ ಮರೆಯಾಗಿ ಹೋಗಿದ್ದವು.

೨. ಕಾಲದ ಭರ್ಜಿ ಮೊನೆಯ ಮೇಲೆ ಮನವ ಕೂರಿಸಿ ನೆನ್ನೆಯನ್ನು ಇವತ್ತಿನ ಬದುಕಲ್ಲಿ ನೆನೆಯುತ್ತಾ ಈ ಕ್ಷಣ ನಾಳೆಯ ನಿರೀಕ್ಷೆಯ ಮರೀಚಿಕೆಯಲ್ಲಿ ತೇಲಿಸುತ್ತಾ

೩. ಗಾಳಿಯಲ್ಲೆ ಎಚ್ಚರಿಸಿದಂತೆ ಕೇಳಿಸಿ ನನ್ನ ಕೈಗೆ ಸಿಗದ ಈ ಕಾಲವನ್ನು ಕಣ್ಣಿಗೆ ಕಾಣದ ಈ ಕಾಲವನ್ನು ನನ್ನ ಯಾವ ಇಂದ್ರಿಯಗಳ ಹಿಡಿತಕ್ಕೂ ಸಾಧ್ಯವಾದ ಈ ಕಾಲವನ್ನು ಅದರ ಹೆಬ್ಬಾವಿನ ಕ್ರೂರ ನುಲಿತವನ್ನು.

೪. ಜಗತ್ತಿನಲ್ಲಿ ಯಾವುದೂ ಭೂತವಲ್ಲ. ಭೂತ ಎಂದ ಕೂಡಲೆ ನಾಳೆ ಇಲ್ಲವೆಂದೇ ಅರ್ಥ. ಇರುವುದೆಲ್ಲವೂ ನಾಳೆಯೇ. ಆ ನಾಳೆಯೆಲ್ಲವೂ ಸದ್ಯದ ಅಸ್ತಿತ್ವವೇ.

೫. ಅಜ್ಜಿಯರು ಜೀವಂತ ಪಳೆಯುಳಿಕೆಯಂತೆ ಕಾಲನ ದವಡೆಗೆ ಸಿಲುಕಿ ನರುಕಿಸಿಕೊಳ್ಳುತ್ತಿದ್ದರು.

ಹೀಗೆ ಭಾಷೆಯನ್ನು ಮೊಗಳ್ಳಿಯವರು ಅತ್ಯಂತ ಸಮರ್ಥವಾಗಿ, ಅನನ್ಯತೆಯಿಂದ ಬಳಸುವ ರೀತಿ ಅವರಿಗೆ ಮಾತ್ರ ಸಾಧ್ಯ.

**ಟಿಪ್ಪಣಿಗಳು**

೧. ವಿಮರ್ಶೆಯ ಪರಿಭಾಷೆ, ಓ. ಎಲ್. ನಾಗಭೂಷಣ ಸ್ವಾಮಿ, ಪು. ೫೩

## ಅಧ್ಯಾಯ ನಾಲ್ಕು

# ಮೊಗಳ್ಳಿ ಕಥನ : ಪಾತ್ರಲೋಕ

### ೪.೧. ಸ್ತ್ರೀಪಾತ್ರಗಳು

ಮೊಗಳ್ಳಿ ಗಣೇಶ್ ಅವರ ಕಥನದಲ್ಲಿ ಸೃಷ್ಟಿಗೊಂಡಿರುವ ಸ್ತ್ರೀಪಾತ್ರಗಳು ವಿಶಿಷ್ಟವಾದವುಗಳಾಗಿದ್ದು ಆ ಪಾತ್ರಗಳ ಮೂಲಕ ಕಟ್ಟಿಕೊಡುವ ಮಹಿಳಾ ದಲಿತ ಜಗತ್ತು ಬೆರಗುಗೊಳಿಸುವಂತಿದೆ ಮಾತ್ರವಲ್ಲದೆ ಅಧ್ಯಯನಯೋಗ್ಯವಾದುದಾಗಿದೆ.

ಮೊಗಳ್ಳಿಯವರ ಕಥೆಗಳಲ್ಲಿ ಸ್ತ್ರೀಪಾತ್ರಗಳು ಹಲವು ಬಗೆಯಲ್ಲಿ ಕಾಣಿಸಿಕೊಳ್ಳುತ್ತವೆ. ಅವು ಆ ಹೆಂಗಸು ಕಥೆಯ ಕೆಂಪಿ, ಕೊಂಡಕಥೆಯ ಸಾವಿತ್ರಿ, ದಿಬ್ಬವ ಕತ್ತಲಲ್ಲಿ ಇಳಿದು ಕಥೆಯ ಇರವ್ವ, ಚಿಲುಮೆ ಕಥೆಯ ಹೆಂಗಸು, ಮಣ್ಣು ಕಥೆಯ ರೇಣುಕವ್ವ, ತ್ರಿವೇಣಿ ಮತ್ತು ಯಮುನ, ಅತ್ತೆ ಕಥೆಯ ಅತ್ತೆ, ಕಾಳಿ ಕಥೆಯ ಕಾಳಿ, ಬಾಳುಕಥೆಯ ಮಾರೆ, ಕೋಮಲಕಾಯ ಕಥೆಯ ಸಾವಿತ್ರಿ, ಅವ್ವ ಕಥೆಯ ಅವ್ವ, ಬಾಡೂಟ ಕಥೆಯ ಮಾದಾವಿ, ಮತ್ತು ಸಾಕಿ, ಕಿಚ್ಚುಕಥೆಯ ಸಾಕವ್ವ, ಹಳೆಚಡ್ಡಿ ಕಥೆಯ ಸಿದ್ದಿ, ನನ್ನಜ್ಜನಿಗೊಂದಾಸೆಯಿತ್ತು ಕಥೆಯಲ್ಲಿನ ಹಲವು ಸ್ತ್ರೀಪಾತ್ರಗಳು ಮುಂತಾದುವನ್ನು ಹೆಸರಿಸಬಹುದು.

ನಮ್ಮ ಸಮಾಜ ಪುರುಷ ಪ್ರಧಾನ ಸಮಾಜ. ಮಹಿಳೆ ಏನಿದ್ದರೂ ಪುರುಷನ ಆಧೀನದಲ್ಲಿ ಮಾತ್ರ ಬದುಕಬೇಕು. ಪುರುಷನಿಲ್ಲದೆ ಅವಳು ಬದುಕುವುದು ಅಸಾಧ್ಯವಾಗಿರುವುದು. ಒಂದು ವೇಳೇ ಬದುಕಿದರೂ ಅವಳು ಹಲವಾರು ಶೋಷಣೆಗಳಿಗೆ ಒಳಗಾಗಬೇಕಾಗುತ್ತದೆ. ಸಮಾಜ ಅವಳನ್ನು ನೋಡುವ ದೃಷ್ಟಿಕೋನವೆ ಬದಲಾಗಿರುತ್ತದೆ. ಆದರೂ ಸಹಿತ ಅವೆಲ್ಲವನ್ನು ಸಹಿಸಿಕೊಂಡು ಅವಳು ಬದುಕುವ ಅನಿವಾರ್ಯತೆ ಕಂಡುಬರುತ್ತದೆ. ಇಂತಹ ಬದುಕನ್ನು ನಿಭಾಯಿಸುವ ಹಲವಾರು ಪಾತ್ರಗಳು ಅವರ ಕಥೆಗಳಲ್ಲಿ ಚಿತ್ರಣಗೊಂಡಿವೆ. ಅವು. ಆ ಹೆಂಗಸು ಕಥೆಯ ಕೆಂಪಿ, ಬಾಳು ಕಥೆಯ ಮಾರೆ, ದಿಬ್ಬದ ಕತ್ತಲಲ್ಲಿ ಇಳಿದ ಕಥೆಯ ಇರವ್ವಾ ಮತ್ತು ಕಿಚ್ಚು ಕಥೆಯ ಸಾಕವ್ವ.

ಆ ಹೆಂಗಸು ಎಂಬ ಕಥೆಯಲ್ಲಿ ಬರುವ ಕೆಂಪಿ ಸಾಮಾನ್ಯ ಮನೆತನದ ಮಹಿಳೆ. ಅವಳು ಕೂಲಿ ಮಾಡಿ ಹೊಟ್ಟೆತುಂಬಿಸಿಕೊಳ್ಳುತ್ತಿರುತ್ತಾಳೆ. ಆದರೆ ಊರಿನ ಕೆಲವು ಪುಂಡರುಗಳಿಗೆ ಅದನ್ನು ಸಹಿಸಲು ಸಾಧ್ಯವಾಗುವುದಿಲ್ಲ. ದಿನಾಲೂ ಅವಳು ಹೊರಗಡೆ ಬಂದಾಗಲೆಲ್ಲ ಗಂಡಸರು ಕಪ್ಪು ವರ್ಣದ ಅವಳ ದೇಹವನ್ನು ರಸಗವಳ ಸವಿದಂತೆ ಸವಿಯುತ್ತಿದ್ದರು. ಆದರೆ ಕೇರಿಯಲ್ಲಿ ಅವಳ ಮೇಲೆ ಬಹಳ ಗೌರವವನ್ನು ಇಟ್ಟುಕೊಂಡಿದ್ದರು. ಅಲ್ಲದೆ ಅವಳ ಶೀಲವಂತಿಕೆಯನ್ನು ಮೆಚ್ಚಿಕೊಂಡಿದ್ದರು. ಅವಳನ್ನು ಯಾರೂ ಮಾತನಾಡಿಸಲು ಸಾಧ್ಯವಿರಲಿಲ್ಲ. ಅಂತಹ ವ್ಯಕ್ತಿತ್ವವನ್ನು ಅವಳು ರೂಢಿಸಿಕೊಂಡಿದ್ದಳು. ಕೆಂಪಿ ಗಂಡ ಸತ್ತ ಮೇಲೆ ಗುಡ್ಡದ ಗವಿಮಠದ ಸಿದ್ದರ ಜೊತೆ

ರುದ್ರಾಕ್ಷಿ ಮಾಲೆ ಹಾಕಿಕೊಂಡು ಸುಮಾರು ದಿನಗಳ ವರೆಗೂ ಊರೂರು ಸುತ್ತಿ ಆ ಮೇಲೆ ತನ್ನ ಸ್ವಂತ ಊರಿಗೆ ಬಂದು ನೆಲಸಿದ್ದಳು. ಅಲ್ಲಿಯ ಅನುಭವಗಳು ಅವಳಿಗೆ ಕಹಿಯನ್ನು ತಂದುಕೊಟ್ಟಿದ್ದವು. ಊರಲ್ಲಿ ಅವಳಿಗೆ ವಾಸಮಾಡಲು ಒಂದು ಮನೆಯೂ ಕೂಡಾ ಇರಲಿಲ್ಲ. ಆದರೆ ಅದಕ್ಕೆ ಎದೆ ಗುಂದದೆ ಗುಡಿಸಲು ಹಾಕಿಕೊಂಡು ಜೀವನ ಮಾಡುತ್ತಿದ್ದಳು. ಕಠೋರವಾದ ಮನಸ್ಸಿನಿಂದ ತನ್ನ ಕೆಲಸ ಕಾರ್ಯಗಳಲ್ಲಿ ತಲ್ಲೀನಳಾಗಿದ್ದಳು. ಕೂಲಿ, ಕುಂಬಳ ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಳು. ಅದರಲ್ಲೆ ಸುಖವನ್ನು ಕಂಡಿದ್ದಳು.

ಇಂತಹ ಚರಿತ್ರೆಯನ್ನು ಹೊಂದಿದ ಕೆಂಪಿಯನ್ನು ಹಲವಾರು ಗಂಡಸರು ಹಲವು ಸಲ ಅವಳನ್ನು ಒಲಿಸಿಕೊಳ್ಳಲು ಪ್ರಯತ್ನ ಮಾಡುತ್ತಲೇ ಇದ್ದರು. ಕೆಂಪಿ ಗುಡ್ಡದ ಗವಿಮಠದಲ್ಲಿ ವಾಸವಾಗಿದ್ದಾಗ ಯಾವನೋ ಒಬ್ಬ ಸನ್ಯಾಸಿ ಅವಳ ಮೈ ಮುಟ್ಟಲು ಪ್ರಯತ್ನ ಮಾಡಿರುತ್ತಾನೆ. ಆದರೆ ಕೆಂಪಿ ಅವನಿಗೆ ಮಾಟದಿಂದ ಉರಿ ಹತ್ತುವ ಹಾಗೆ ಮಾಡಿ ಅವನಿಂದ ತಪ್ಪಿಸಿಕೊಂಡು ಬಂದಿರುತ್ತಾಳೆ. ಸನ್ಯಾಸಿಗೆ ಕೊಟ್ಟ ಶಿಕ್ಷೆಯನ್ನು ಮುಂದುವರಿಸಿಕೊಂಡಿರುತ್ತಾಳೆ. ಆ ಶಿಕ್ಷೆ ಯಾವುದೊ ಎಂದೋ ಮಾಟಗಾರರಿಂದ ತಿಳಿದಿದ್ದ ಚುರುಕ ಸೊಪ್ಪಿನ ಮಾಟವನ್ನು ಮಾಡಿ ಆ ಸೊಪ್ಪಿಗೆ ಇನ್ನೇನೊ ಪ್ರಾಣಿಯ ಅಮೇಧ್ಯವನ್ನು ಬೆರಿಸಿ ಅವನ ಮೈಗೆಲ್ಲ ಬಳಿದು ಅವನ ಮರ್ಮಾಂಗವೆಲ್ಲ ಆ ಲೇಹ್ಯದಿಂದ ಆವರಿಸಿ ಆವರಿಸಿ ಅವನು ಉರಿತದಿಂದ ಒದ್ದಾಡಿ ಇನ್ನೊಂದು ಸಲ ಅವಳನ್ನು ನೋಡದ ಹಾಗೆ ಮಾಡಿದ್ದಳು. ಇಂತಹ ಶಿಕ್ಷೆ ಅದಾಗಿತ್ತು. ಅವಳು ವಿನಾ ಕಾರಣ ಯಾರ ಮೇಲೆ ಜಗಳಕ್ಕೆ ಹೋಗುತ್ತಿರಲಿಲ್ಲ. ಅವಳ ತಂಟೆಗೆ ಬಂದರೆ ಬಿಡುತ್ತಿರಲಿಲ್ಲ. ಒಟ್ಟಾರೆಯಾಗಿ ಅವಳ ವ್ಯಕ್ತಿತ್ವ ನಿಗೂಢವಾಗಿತ್ತು. ಇಂತಹ ವ್ಯಕ್ತಿತ್ವದ ಕೆಂಪಿಯನ್ನು ಪೂಜಾರಿ ಮನಸ್ಸಿನಲ್ಲಿಯೆ ಇಷ್ಟಪಡುತ್ತಿದ್ದ. ಒಂದಿನಾದರೂ ಅವಳನ್ನು ಅನುಭವಿಸಲೆ ಬೇಕು ಎಂದು ನಿರ್ಧಾರ ಮಾಡಿದ. ಅದಕ್ಕೆ ತಕ್ಕ ಹಾಗೆ ಉಪಾಯವನ್ನು ಮಾಡುತ್ತಾನೆ. ಊರಲ್ಲಿ ದೊಡ್ಡ ಮನುಷ್ಯ ಗೌಡನಿಗೆ ಅವಳ ಬಗ್ಗೆ ಹೇಳಿ ಅವನ ತಲೆಯಲ್ಲಿ ಬರುವ ಹಾಗೆ ಮಾಡುತ್ತಾನೆ. ಗೌಡನು ಅವಳನ್ನು ಅನುಭವಿಸಿದರೆ ತನಗೆ ಸಿಕ್ಕೇ ಸಿಗುತ್ತಾಳೆ ಎಂಬುದು ಪೂಜಾರಿಯ ಉಪಾಯವಾಗಿರುತ್ತದೆ. ತನ್ನ ಉಪಾಯಕ್ಕೆ ತಕ್ಕ ಹಾಗೆ ಕೆಂಪಿಗೆ ಗೌಡ ಕರೆದಿರುತ್ತಾನೆ ನಿನಗೆ ಎಂದು ಹೇಳಿ ಕಳಿಸಿರುತ್ತಾನೆ. ಅದೇ ಪ್ರಕಾರ ಈ ಉಪಾಯ ಸಫಲವಾಗುತ್ತದೆ. ಆದರೆ ಕೆಂಪಿ ಆ ರಾತ್ರಿ ಗೌಡನಿಗೆ ತಾನು ತಯಾರು ಮಾಡಿಟ್ಟ ಲೇಪನವನ್ನು ಅವನಿಗೆ ಹಚ್ಚಿ ಅಲ್ಲಿಂದ ಹೊರಗೆ ಹೋಗುವ ಹಾಗೆ ಮಾಡಿರುತ್ತಾಳೆ. ಗೌಡ ಇದನ್ನು ಯಾರಿಗೂ ಹೇಳದೆ ಸುಮ್ಮನೆ ಇರುತ್ತಾನೆ. ಪೂಜಾರಿ ಕೆಲಸ ಆಗಿದೆ ಎಂದು ತಿಳಿದು ಮರುದಿನ ಕೆಂಪಿಯ ಮನೆಗೆ ಹೋಗುತ್ತಾನೆ. ಅವಳು ಉಪಾಯದಿಂದ ಅವನಿಗೂ ಅದೇ ಲೇಪನವನ್ನು ಸವರಿ ಕಳಿಸಿರುತ್ತಾಳೆ. ಪೂಜಾರಿ ಮೈ ಮೇಲಿನ ಬಟ್ಟೆಯ ಪ್ರಜ್ಞೆಯೇ ಇಲ್ಲದೆ ಓಡಿ ಹೋಗುತ್ತಾನೆ. ಯಾರಿಗೂ ಕಾಣದೆ ತನ್ನ ಮನೆಯನ್ನು ಸೇರಿಕೊಳ್ಳುತ್ತಾನೆ. ಹೀಗೆ ಕೆಂಪಿ ತನಗೆ ಕೆಡಿಸಲು ಬಂದವರಿಗೆಲ್ಲ ಉಪಾಯದಿಂದ, ಜಾಣತನದಿಂದ ಮರಳಿ ಕಳಿಸುತ್ತಾ ಬರುತ್ತಾಳೆ. ಇದರಿಂದ ತನ್ನ ವ್ಯಕ್ತಿತ್ವವನ್ನು ಕಾಪಾಡಿಕೊಳ್ಳುತ್ತಾಳೆ.

ಇನ್ನು ಬಾಳು ಕಥೆಯ ಮಾರಿ ಪಾತ್ರದ ಕುರಿತು ನೋಡಿದರೆ ಅವಳು ವಯಸ್ಸಿಗೆ ಬಂದ ಹುಡುಗಿ. ಅವಳಿಗೆ ತಂದೆ ತಾಯಿ ಮರಣ ಹೊಂದಿರುತ್ತಾರೆ. ಮನೆಯ ಜವಾಬ್ದಾರಿ ಅವಳ ಮೇಲ ಬಿದ್ದಿರುತ್ತದೆ. ಮನೆಯಲ್ಲಿ ತಂಗಿ, ತಮ್ಮ, ತಾನು ಇರುತ್ತಾರೆ. ತಂಗಿ ಮಾತನಾಡಲು ಬರದ ಮೂಗಿ. ತಮ್ಮ ಸೋಮಾರಿಯಾಗಿ ತಿರುಗಿ ರಾತ್ರಿ ಕುಡಿದು ಬರುವವನು. ಇಂತಹ ಪರಿಸ್ಥಿತಿಯ ಸಂಸಾರದ ಹೊರೆ ಅವಳ ಮೇಲಿರುತ್ತದೆ. ಇಂತಹ ಸಂದರ್ಭದಲ್ಲಿ ಮಾರಿ ಪೇಟೆಗೆ ಹೋಗಿ ಕೆಲಸ ಕಾರ್ಯಗಳನ್ನು ಮಾಡಿ ಹಣ ಗಳಿಸಿಕೊಂಡು ಬಂದು ಸಂಸಾರದ ಖರ್ಚು ವೆಚ್ಚವನ್ನು ನೋಡಿಕೊಳ್ಳುತಾ ಇರುತ್ತಾಳೆ. ಊರಲ್ಲಿಯ ಯುವಕರು ಅವಳ ದೇಹ ಸೌಂದರ್ಯವನ್ನು ವರ್ಣಿಸುತ್ತಾ ಆಕೆಗೆ

ಚುಚ್ಚು ಮಾತುಗಳನ್ನು ಆಡುತ್ತಾ ಇರುತ್ತಾರೆ. ಅವಳು ಪೇಟೆಗೆ ಹೋಗಿ ದೇಹವನ್ನು ಮಾರಿಕೊಂಡು ಹಣ ಸಂಪಾದಿಸುತ್ತಾಳೆಂದು ಊರಲ್ಲಿ ಯುವಕರು ಅವಳ ತಮ್ಮ ತಿಮ್ಮನಿಗೆ ಹೇಳುತ್ತಾರೆ. ಇದರಿಂದ ಕುಪಿತನಾದ ತಿಮ್ಮ ರಾತ್ರಿ ಬಂದು ತನ್ನ ಅಕ್ಕನಿಗೆ ಬಾಯಿಗೆ ಬಂದ ಹಾಗೆ ಮಾತನಾಡುತ್ತಾನೆ. ಇದನ್ನು ಸಹಿಸಿಕೊಳ್ಳಲು ಸಾಧ್ಯವಾಗದೆ ಫೂರಿ ಮನೆ ಬಿಟ್ಟು ಹೋಗುತ್ತಾಳೆ. ಹೀಗೆಮಾರಿ ಪುರುಷರಿಂದ ಶೋಷಣೆಗೊಳಗಾಗುತ್ತಾಳೆ.

ಆ ಹೆಂಗಸು ಕಥೆಯ ಕೆಂಪಿಯ ಜೀವನದ ಹಾಗೆ ಇನ್ನೊಂದು ಪಾತ್ರ ದಿಬ್ಬದ ಮೇಲೆ ಇಳಿದಾಗ ಕಥೆಯಲ್ಲಿ ಕಂಡುಬರುತ್ತದೆ. ಅವಳ ಹೆಸರು ಇರವ್ವ. ಇರವ್ವ ವಿಧವೆ. ಊರಿನ ಯಾವುದೊ ಜಾತಿ ಕಲಹದಿಂದ ಅವಳ ಗಂಡನನ್ನು ಕಳೆದುಕೊಂಡಿರುತ್ತಾಳೆ. ಅವನನ್ನು ಊರಿನ ಗೌಡ ಮತ್ತು ಪೂಜಾರಿ ಕೊಲೆ ಮಾಡಿರುತ್ತಾರೆ. ಅವಳಿಗೆ ನಾಗರಾಜು ಎಂಬ ಮಗನಿರುತ್ತಾನೆ. ಆದರೆ ಮಗ ಅರೆಹುಚ್ಚನಾಗಿ ಊರಲ್ಲಿ ತಿರುಗುತ್ತಾನೆ. ಇರವ್ವ ಹಲವಾರು ಕಷ್ಟಗಳಲ್ಲಿ ಒಬ್ಬಂಟಿಗಳಾಗಿ ಬದುಕನ್ನು ಸಾಗಿಸುತ್ತಿರುತ್ತಾಳೆ. ಮಗನನ್ನು ಅನಾರೋಗ್ಯದ ಕಾರಣದಿಂದ ಪೇಟೆಯಿಂದ ಹಳ್ಳಿಗೆ ಕರೆದುಕೊಂಡು ಬಂದಿರುತ್ತಾಳೆ. ನಾಗರಾಜ ತನ್ನ ತಂದೆ ಊರಿನ ದಿಬ್ಬದ ಮೇಲೆ ಇರುವ ದೇವಸ್ಥಾನದ ಹತ್ತಿರ ಕೊಲೆಯಾಗಿರುವುದು ಎಂದು ತಿಳಿದು ಪ್ರತಿ ದಿನವೂ ಅವನು ಅಲ್ಲಿ ಹೋಗಿ ಬರುತ್ತಿರುತ್ತಾನೆ. ಅದನ್ನು ಪೂಜಾರಿಗೆ ಸಹಿಸಿಕೊಳ್ಳಲು ಆಗುವುದಿಲ್ಲ. ಪೂಜಾರಿ ಹಲವಾರು ಸಲ ಇರವ್ವನಿಗೆ ನಿನ್ನ ಮಗನನ್ನು ದಿಬ್ಬದ ಮೇಲಿನ ದೇವಸ್ಥಾನಕ್ಕೆ ಕಳಿಸಬೇಡ ಎಂದು ಆಜ್ಞೆ ಮಾಡಿರುತ್ತಾನೆ. ಆದರೆ ನಾಗರಾಜ ಇರವ್ವನ ಮಾತನ್ನು ಕೇಳದೆ ಪದೆ ಪದೆ ಅಲ್ಲಿಗೆ ಹೋಗಿ ಕುಳಿತು ಬರುತ್ತಾನೆ. ಇದು ವಿಪರೀತಕ್ಕೆ ಹೋಗಿ ಪೂಜಾರಿ ತನ್ನ ಮೈಮೇಲೆ ದೇವರು ಬಂದಿದೆ. ದೇವರು ಸಿಟ್ಟಿಗೆ ಬಂದಿದ್ದಾನೆಂದು ಅವಳ ಮನೆಗೆ ಬರುತ್ತಾನೆ. ನೀನು ನಿನ್ನ ಮಗನನ್ನು ಕಳಿಸಬೇಡ ಕಳಿಸದರೆ ಅವನು ಸತ್ತು ಹೋಗುತ್ತಾನೆಂದು ಬೆದರಿಕೆ ಹಾಕುತ್ತಾನೆ. ಹಾಗೆ ಅವಳ ಮೈ ಮುಟ್ಟಿ ಕೈ ಮುಟ್ಟಿ ಮಾತನಾಡಿಸುತ್ತಾನೆ. ಅಸ್ತವ್ಯಸ್ತವಾದ ಅವಳ ದೇಹವನ್ನು ಕೆಟ್ಟ ದೃಷ್ಟಿಯಿಂದ ನೋಡುತ್ತಾನೆ. ಇರವ್ವ ಅದಕ್ಕೆ ಹೆದರಿಕೊಂಡು ನಡುಗುತ್ತಿರುತ್ತಾಳೆ. ನಾಗರಾಜ ಬಂದು ಪೂಜಾರಿಯನ್ನು ಹೊಡೆದು ತುಳಿದು ಕೊಲೆ ಮಾಡುತ್ತಾನೆ. ಕೊಲೆ ಮಾಡಿದ್ದಕ್ಕೆ ಅವನು ದಿಬ್ಬದ ಮೇಲಿನಿಂದ ಬಿದ್ದು ಪ್ರಾಣ ಬಿಡುವ ಶಕ್ತಿಗೆ ಗುರಿಯಾಗಿರುತ್ತಾನೆ. ಕೊನೆಗೆ ಅವನು ಸತ್ತು ಹೋದ ನಂತರ ಇರವ್ವ ಮತ್ತಷ್ಟು ದುಃಖದಿಂದ ಬಳಲುತ್ತಾಳೆ. ಅವಳಿಗೆ ಜೀವನ ಭಾರವಾಗಿ ಕಾಣುತ್ತದೆ. ಬದುಕೆ ಅಸಾಧ್ಯವಾಗುತ್ತದೆ.

ಇದೆ ತರಹ ಸಮಾಜದಲ್ಲಿ ಪುರುಷನಿಂದ ಶೋಷಣೆಗೊಳಗಾಗುವಳು ಸಾಕವ್ವ. ಇವಳು ಮೊಗಳ್ಳಿಯವರ ಕಿಚ್ಚು ಕಥೆಯಲ್ಲಿ ಕಂಡು ಬರುವ ಪಾತ್ರ. ಸಾಕವ್ವಳು ಕೂಡಾ ವಿಧವೆ. ಆದರೆ ಅವಳಿಗೆ ಪುಟ್ಟಿ ಎನ್ನುವ ಮಗಳಿರುತ್ತಾಳೆ. ಈ ಮಗು ತುಂಬಾ ಚಿಕ್ಕದಾಗಿರುತ್ತದೆ. ಸಾಕವ್ವಳು ಅನ್ಯಾಯದಿಂದಲೋ ಅಥವ ಅನಿವಾರ್ಯತೆಯಿಂದಲೊ ತನ್ನ ಮೈದುನನ ಜೊತೆ ಲೈಂಗಿಕ ಸಂಬಂಧವನ್ನು ಹೊಂದಿರುತ್ತಾಳೆ. ಆದರೆ ಸಾಕವ್ವಳ ಸಂಸಾರವು ಕೂಡಾ ಅವಳ ಜವಾಬ್ದಾರಿಯಲ್ಲಿಯೆ ಇರುತ್ತದೆ. ಸಾಕವ್ವ ಇಲ್ಲವಾದರೆ ಸಾಗುತ್ತಿರಲಿಲ್ಲ. ಮೈದುನ ರಾತ್ರಿ ಮಾತ್ರ ಮನೆಗೆ ಬರುತ್ತಿರುತ್ತಾನೆ. ಸಾಕವ್ವ ತನ್ನ ಲೈಂಗಿಕ ಸಂಬಂಧದಿಂದ ಸಮಾಜದಲ್ಲಿ ಹಲವಾರು ನಿಂದನೆಗಳಿಗೆ ಒಳಗಾಗುತ್ತಾಳೆ. ಊರಲ್ಲಿ ಮೈದುನನ ಜೊತೆ ಕುಡಿದು ಕುಪ್ಪಳಿಸುವವರು ಸಾಕವ್ವನಿಗೆ ಬಾಯಿಗೆ ಬಂದ ಹಾಗೆ ಬಯ್ಯುತ್ತಿರುತ್ತಾರೆ. ಇದರಿಂದ ಸಾಕವ್ವಳ ಬದುಕು ಬೀದಿಗೆ ಬಂದಿರುತ್ತದೆ. ಜೀವನ ಅವಳಿಗೆ ಬೇಡವಾಗುತ್ತದೆ. ಈ ರೀತಿಯಾಗಿ ಸಾಕವ್ವ ಗಂಡನನ್ನು ಕಳೆದುಕೊಂಡು ಆಸರೆ ಇಲ್ಲದೆ ಹಲವಾರು ಕಷ್ಟಗಳಿಂದ ಬದುಕನ್ನು ಅನಿವಾರ್ಯವಾಗಿ ಸಾಗಿಸುತ್ತಿರುತ್ತಾಳೆ.

ಮಹಿಳೆಯರು ನಿರಂತರ ಪುರುಷನ ಅತ್ಯಾಚಾರಕ್ಕೆ ಒಳಗಾಗುತ್ತಲೇ ಇದ್ದಾರೆ. ಇದು ಕೊನೆ ಮೊದಲೆನ್ನೆನ್ನುವುದೇ ಇಲ್ಲ. ನಿರಂತರ ಮುಂದುವರೆದಿದೆ. ಪುರುಷನು ಎಷ್ಟೆ ಬುದ್ಧಿವಂತನಾದರೂ ಶಿಕ್ಷಿತನಾದರೂ ನಾಗರಿಕ ಸಮಾಜದಲ್ಲಿ

ಬದುಕಿದ್ದರೂ ಎಷ್ಟೇ ಪ್ರಗತಿಪರ ಮಾತುಗಳನ್ನು ಅವನು ಆಡುತ್ತಿದ್ದರೂ ಪುರುಷ ಮಹಿಳೆಯ ಮೇಲೆ ನಡೆಸುವ ಅತ್ಯಾಚಾರಕ್ಕೆ ಮುಂದುವರೆದೇ ಇದೆ. ಒಂದಲ್ಲ ಒಂದು ಕಾರಣಕ್ಕೆ ಪ್ರತಿ ದಿನ ಪ್ರತಿ ಕ್ಷಣ ಅವಳು ಅವನ ಕ್ರೌರ್ಯಕ್ಕೆ ಒಳಗಾಗಲೇಬೇಕಾದ ಪರಿಸ್ಥಿತಿ ಇದೆ. ಇಂತಹ ಪರಿಸ್ಥಿತಿಗೆ ಒಳಗಾದ ಮಹಿಳೆಯರನ್ನು ಮೊಗಳ್ಳಿಯವರ ಹಲವಾರು ಕಥೆಗಳಲ್ಲಿ ಕಾಣಬಹುದಾಗಿದೆ. ಅವರು ಇಂತಹ ಮಹಿಳೆಯರು ಹೇಗೆ ಬದುಕುತ್ತಾರೆ ಎಂಬುದನ್ನು ಹಲವಾರು ಪಾತ್ರಗಳ ಮೂಲಕ ಚಿತ್ರಿಸಿರುವುದನ್ನು ಕಾಣಬಹುದು.

ಉದಾಹರಣೆಗೆ ಕೊಂಡ ಕಥೆಯಲ್ಲಿನ ಮತ್ತು ಕೋಮಲಕಾಯ ಕಥೆಯಲ್ಲಿನ ಸಾವಿತ್ರಿ ಪಾತ್ರವನ್ನು ಹೆಸರಿಸಬಹುದು. ಕೊಂಡ ಕಥೆಯಲ್ಲಿ ಕಂಡುಬರುವ ಅತ್ಯಾಚಾರಕ್ಕೆ ಒಳಗಾದ ಸಾವಿತ್ರಿ ಸಾಮಾನ್ಯವಾದ ಸರಳವಾದ ಜೀವನ ಶೈಲಿಯನ್ನು ಅಳವಡಿಸಿಕೊಂಡವಳು. ಸಾವಿತ್ರಿ ಕೇರಿಯ ಚಿಕ್ಕಣ್ಣನ ಸಹೋದರಿ. ಪುರುಷ ಪುರುಷರ ಮಧ್ಯೆ ಇರುವ ದ್ವೇಷಕ್ಕೆ ಮಹಿಳೆ ಬಲಿಯಾಗುವುದು ಸರ್ವೇ ಸಾಮಾನ್ಯ. ಸಾವಿತ್ರಿ ಹೀಗೆ ಪುರುಷರ ದ್ವೇಷಕ್ಕೆ ಬಲಿಯಾದವಳು. ಊರಲ್ಲಿ ಊರಿನ ಗೌಡ ಉಪಾಯದಿಂದ ಕೇರಿಯಲ್ಲಿ ಚಿಕ್ಕಣ್ಣನಿಗೂ ಮತ್ತು ರುದ್ರನಿಗೂ ಜಗಳ ಹಚ್ಚಿರುತ್ತಾನೆ. ಊರಲ್ಲಿ ಮೆಂಬರ್ ಸೀಟು ಹಂಚಿಕೆ ಇರುವುದರಿಂದ ಕೇರಿಯವರಿಗೂ ಒಂದು ಸೀಟು ಕಾಯ್ದಿರಿಸಬೇಕಾಗಿರುವುದರಿಂದ ಆ ಸೀಟಿಗೆ ಯಾರು ಇರದೆ ಇರುವ ಹಾಗೆ ಮಾಡುವುದು ಗೌಡನ ಹಂಚಿಕೆಯಾಗಿರುತ್ತದೆ. ಅದಕ್ಕೆ ಚಿಕ್ಕಣ್ಣ ಮತ್ತು ರುದ್ರರ ಜಗಳಕ್ಕೆ ಸಾವಿತ್ರಿ ಬಲಿಯಾಗುತ್ತಾಳೆ. ಸಾವಿತ್ರಿಯನ್ನು ರುದ್ರ ಅವಳು ಬಟ್ಟೆ ತೊಳೆಯಲು ಕೆರೆಗೆ ಹೋದಾಗ ಗುಪ್ತವಾಗಿ ಬಂದು ಅವಳ ಮೇಲೆ ಅತ್ಯಾಚಾರ ಮಾಡಿರುತ್ತಾನೆ. ಇದರ ಫಲವಾಗಿ ಸಾವಿತ್ರಿ ಗರ್ಭಿಣಿಯಾಗಿರುತ್ತಾಳೆ. ಇದು ಒಬ್ಬರಿಂದ ಒಬ್ಬರಿಗೆ ಸುದ್ದಿ ಹಬ್ಬುತ್ತದೆ. ಅವಳ ಅಣ್ಣ ಚಿಕ್ಕಣ್ಣನಿಗೆ ತಿಳಿದು ಸಾವಿತ್ರಿಯನ್ನು ಹಿಂಸೆಗೆ ಒಳಪಡಿಸುತ್ತಾನೆ. ಇದಕ್ಕೆ ಕಾರಣ ಯಾರು ಎಂದು ಅವಳನ್ನು ಹಲವಾರು ಶಿಕ್ಷೆಗೆ ಒಳಪಡಿಸುತ್ತಾನೆ. ಆದರೆ ಸಾವಿತ್ರಿ ಮರ್ಯಾದೆಯಿಂದ ಬಚ್ಚಿಟ್ಟುಕೊಳ್ಳಲು ಪ್ರಯತ್ನ ಮಾಡುತ್ತಾಳೆ. ಚಿಕ್ಕಣ್ಣ ಬಿಡದೆ ಅವನು ಯಾರೆಂದು ತಿಳಿದು ಅವನ ಮೇಲೆ ಒಂದು ಕಣ್ಣನ್ನು ಇಟ್ಟಿರುತ್ತಾನೆ. ಈ ದ್ವೇಷ ಹಾಗೆ ಮುಂದುವರಿದಿರುತ್ತದೆ.

ಊರಲ್ಲಿ ದೇವರ ಜಾತ್ರೆ ಇರುತ್ತದೆ. ಅಲ್ಲಿ ಕೊಂಡವನ್ನು ಹಾಕಲಾಗಿರುತ್ತದೆ. ಚಿಕ್ಕಣ್ಣ ಮತ್ತು ರುದ್ರ ಇಬ್ಬರು ಜಗಳಾಡಿ ಕೊಂಡದಲ್ಲಿ ಬಿದ್ದು ಸತ್ತು ಹೋಗುತ್ತಾರೆ. ಸಾವಿತ್ರಿ ಮಾತ್ರ ಜೀವನಪರ್ಯಂತ ಅದೇ ನರಕದಲ್ಲಿ ಬಾಳುವ ಹಾಗೆ ಆಗುತ್ತದೆ. ಈ ತೆರನಾಗಿ ಸಾವಿತ್ರಿ ರುದ್ರನ ಅತ್ಯಾಚಾರಕ್ಕೆ ಒಳಗಾಗಿ ಪುರುಷನ ಶೋಷಣೆಯನ್ನು ಸಹಿಸಿಕೊಂಡು ನರಕದಲ್ಲಿ ಬದುಕುತ್ತಿರುತ್ತಾಳೆ.

ಕಾಲ ಬದಲಾವಣೆ ಆಗುತ್ತಾ ಹೋದ ಹಾಗೆ ಆಧುನಿಕತೆ ಹೆಚ್ಚುತ್ತಾ ಹೋದ ಹಾಗೆ ಪುರುಷನ ಕ್ರೂರ ಕೃತ್ಯಗಳು ಬದಲಾಗುತ್ತಾ ಹೋಗುತ್ತವೆ. ಆ ಕ್ರೌರ್ಯದ ವಿಧಾನ ಸಮಯ ಸಂದರ್ಭಗಳು ಬದಲಾಗುತ್ತಾ ಹೋಗುತ್ತವೆ.

ಇಂದು ಹೆಣ್ಣು ಮಕ್ಕಳು ಹೊರಗಡೆ ಹೋಗಿ ಮನೆಗೆ ಬರುತ್ತಾರೆ ಎನ್ನುವ ನಂಬಿಕೆ ತಂದೆ ತಾಯಿಗಳು ಕಳೆದುಕೊಂಡಿದ್ದಾರೆ. ಕಾಲ ಎಷ್ಟೇ ಸುಧಾರಣೆ ಆದರೂ ಮಹಿಳೆಯ ಮೇಲೆ ಅತ್ಯಾಚಾರ ಮಾತ್ರ ನಿಂತಿರುವುದಿಲ್ಲ. ಇಂತಹದು ಶಾಲ ಕಾಲೇಜುಗಳಲ್ಲಿ ಇಂದು ಹೆಚ್ಚಾಗಿ ಕಂಡುಬರುತ್ತದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಪ್ರತಿದಿನ ಸುದ್ದಿಗಳು ಕಂಡುಬರುತ್ತವೆ. ಶಾಲಾ ವಿದ್ಯಾರ್ಥಿಗಳ ಮೇಲೆ ಶಿಕ್ಷಕನ ಅತ್ಯಾಚಾರ ಎಂದು ಕೇಳಲಾಗುತ್ತದೆ. ಇಂತಹ ಒಂದು ದುರಾದೃಷ್ಟಕ್ಕೆ ಒಳಗಾದವಳು ಮೊಗಳ್ಳಿಯವರ ಕೋಮಲ ಕಾಲಯ ಕಥೆಯ ಸಾವಿತ್ರಿ ಎಂಬ ಪಾತ್ರ.

ಸಾವಿತ್ರಿ ಒಬ್ಬ ವಿಧವೆಯ ಮಗಳು. ಅವಳು ಸುಂದರವಾಗಿರುತ್ತಾಳೆ. ಮಗಳು ಓದಿ ವಿದ್ಯಾವಂತಳಾಗಲಿ ಎಂದು ಅವಳ ತಾಯಿ ಓದಿಸುತ್ತಿರುತ್ತಾಳೆ. ಆದರೆ ಶಾಲೆಯಲ್ಲಿ ಹೆಡ್‌ಮಾಸ್ತರ ಅವಳನ್ನು ದಿನಾಲು ತನ್ನ ಕಾಮಕ್ಕೆ

ಬಳಸಿಕೊಳ್ಳುತ್ತಾ ಇರುತ್ತಾನೆ. ಆ ಹುಡುಗಿ ಸಾವಿತ್ರಿ ಯಾರ ಹತ್ತಿರ ಆಗಲಿ ತಾಯಿಯ ಹತ್ತಿರ ಕೂಡಾ ಹೇಳುವುದಿಲ್ಲ. ಇದು ತುಂಬಾ ವಿಪರೀತಕ್ಕೆ ಹೋಗುತ್ತದೆ. ಶಾಲಾ ವಿದ್ಯಾರ್ಥಿಗಳ ಮುಂದೆ ಸಾವಿತ್ರಿಯನ್ನು ಆ ಮಾಸ್ತರ ಮೈ ಮುಟ್ಟುವುದು ಕೈ ಮುಟ್ಟುವುದು ಮಾಡುತ್ತಿರುತ್ತಾನೆ. ಆದರೆ ಇದು ಯಾರಿಗೂ ಗೊತ್ತಾಗುವುದಿಲ್ಲ. ಸಾವಿತ್ರಿಯನ್ನು ತನ್ನ ರೂಮಿಗೆ ಕರೆದುಕೊಂಡು ಹೋಗಿ ಆ ಮೇಲೆ ಹೊರಗೆ ಕಳಿಸುತ್ತಾ ಇರುತ್ತಾನೆ. ಇದರಿಂದ ಸಾವಿತ್ರಿಗೆ ಗೊತ್ತೇ ಆಗದೆ ಬಾಯಿ ಬಿಡದೆ ಆ ಕಷ್ಟವನ್ನು ನೋವನ್ನು ಸಹಿಸಿಕೊಂಡಿರುತ್ತಾಳೆ. ಈ ಕಾರಣಕ್ಕೆ ಸಾವಿತ್ರಿ ಆ ಮಾಸ್ತರನಿಂದ ತಪ್ಪಿಸಿಕೊಳ್ಳಲು ಆಗುವುದಿಲ್ಲ. ಅವಳು ಮುಂದಿನ ತರಗತಿಗೂ ಹೋಗುವುದಾಗಿರಲಿಲ್ಲ. ಕೊನೆಗೆ ಸಾವಿತ್ರಿ ಹೀಗೆ ಶಿಕ್ಷಕನಿಂದ ಅತ್ಯಾಚಾರಕ್ಕೆ ಒಳಗಾಗಿ ಸತ್ತೆ ಹೋಗುತ್ತಾಳೆ. ಆವಾಗ ಶಿಕ್ಷಕ ಅವಳನ್ನು ತೆಗೆದುಕೊಂಡು ಹೋಗಿ ಎಲ್ಲೋ ಬಿಸಾಕಿ ಬಂದಿರುತ್ತಾನೆ. ಇದು ಅವಳ ತಾಯಿಗೆ ಎಷ್ಟೋ ದಿನ ಗೊತ್ತೇ ಆಗುವುದಿಲ್ಲ. ಕೊನೆಗೆ ಒಂದು ದಿನ ಸತ್ಯ ತಿಳಿದ ಅವಳ ತಾಯಿ ಶಿಕ್ಷಕನ ಮೇಲೆ ಕೇಸ್ ಮಾಡದೆ ಗೌಪ್ಯವಾಗಿ ಅವನನ್ನು ಕೊಲೆ ಮಾಡಿ ಬಂದಿರುತ್ತಾಳೆ.

ಹೀಗೆ ಮೊಗಳ್ಳಿಯವರ ಕಥೆಗಳಲ್ಲಿ ಅತ್ಯಾಚಾರಕ್ಕೆ ಮಹಿಳೆಯರು ಯಾವ ಕಾರಣದಿಂದ ಯಾವ ಸಮಯ ಸಂದರ್ಭದಲ್ಲಿ ಹೇಗೆ ಒಳಗಾಗುತ್ತಾರೆ ಅದರಿಂದ ಅವರು ಎಂತೆಂಥಹ ಕಷ್ಟ, ನೋವುಗಳನ್ನು ಅನುಭವಿಸಬೇಕಾಗುತ್ತದೆ ಎಂದು ಈ ಎರಡು ಪಾತ್ರಗಳ ಮೂಲಕ ತೋರಿಸಿಕೊಟ್ಟಿದ್ದಾರೆ.

ಪ್ರತಿ ಕುಟುಂಬದಲ್ಲಿ ಮಹಿಳೆಯನ್ನು ಶೋಷಣೆಗೆ ಒಳಪಡಿಸಲಾಗುತ್ತದೆ. ಕೌಟುಂಬಿಕ ಹಿಂಸೆಯಿಂದ ಅವಳು ತಪ್ಪಿಸಿಕೊಳ್ಳಲು ಸಾಧ್ಯವಿರುವುದಿಲ್ಲ. ಹಲವಾರು ಕಾರಣಗಳಿಂದ ಅದು ಅವಳ ಪಾಲಿಗೆ ಇದ್ದೆ ಇರುತ್ತದೆ. ಇದು ಸರ್ವೆಸಾಮಾನ್ಯವಾಗಿ ಬಿಟ್ಟಿದೆ. ಸರಕಾರ ಕೌಟುಂಬಿಕ ಹಿಂಸೆಯ ಬಗ್ಗೆ ಎಷ್ಟೇ ಕಾನೂನು ತಂದರೂ ಅದು ಮಹಿಳೆಗೆ ತಪ್ಪಿದ್ದಲ್ಲ. ಕುಟುಂಬದ ಪ್ರಭುತ್ವ ಅವಳಿಗೆ ಬಗ್ಗಿಸಿಯೇ ಬಗ್ಗಿಸುತ್ತದೆ. ಇಂತಹ ಕೌಟುಂಬಿಕ ಹಿಂಸೆಗೆ ಒಳಗಾಗುವ ಮಹಿಳೆಯ ಬದುಕು ಹೇಗಿರುತ್ತದೆ ಅವಳು ಉಂಡ ನೋವು ನಲಿವುಗಳಿಗೆ ಬಲಿಯಾಗುತ್ತಾಳೆ ಎಂದು ಅನಾವರಣ ಮಾಡಲು ಮೊಗಳ್ಳಿಯವರು ತಮ್ಮ ಕಥೆಗಳಲ್ಲಿ ಹಲವಾರು ಇಂತಹ ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಉದಾ ಬಾಡೂಟ ಕಥೆಯ ಮಾದಾವಿ, ಹಳೆಚಡ್ಡಿ ಕತೆಯ ಸಿದ್ದಿ, ಚಿಲುಮೆ ಕಥೆಯ ಹೆಂಗಸು, ಅವ್ವ ಕತೆಯ ಅವ್ವ ಮಣ್ಣು ಕಥೆಯ ರೇಣುಕವ್ವ ಮತ್ತು ತ್ರಿವೇಣಿ ಮುಂತಾದ ಪಾತ್ರಗಳನ್ನು ಹೆಸರಿಸಬಹುದು.

ಮಹಿಳೆಗೆ ಪತಿಯೆ ಪರದೈವ, ಪತಿಯಿಲ್ಲದೆ ಅವಳು ಬದುಕಲು ಸಾಧ್ಯವಿಲ್ಲ, ಬದುಕಿದರೂ ಅವಳು ಹಲವಾರು ಹಿಂಸೆಗಳಿಗೆ ಒಳಗಾಗುತ್ತಾಳೆ ಎನ್ನುವುದು ಎಲ್ಲರ ನಂಬಿಕೆಯಲ್ಲಿ ಇದೆ. ಗಂಡನ ಮನೆಬಿಟ್ಟು ಅವರು ಮನೆಯಲ್ಲಿ ಅವಳ ಸ್ಥಾನ ಪಡೆದುಕೊಂಡರೆ ಅಲ್ಲಿ ಅವಳು ಹಲವಾರು ಚಿತ್ರಹಿಂಸೆಗಳಿಗೆ ಒಳಗಾಗಬೇಕು. ಇಲ್ಲಿ ಅನಿವಾರ್ಯವಾಗಿ ಅವಳು ಬದುಕಬೇಕಾಗುತ್ತದೆ.

ಇಂತಹ ಪರಿಸ್ಥಿತಿಗೆ ಒಳಗಾದವಳು ಅತ್ತೆ ಕಥೆಯ ಅತ್ತೆಯ ಪಾತ್ರ. ಅತ್ತ ಗಂಡನ ಮನೆಯಲ್ಲಿ ಗಂಡನಿಂದ ತಿರಸ್ಕೃತಳಾಗಿರುತ್ತಾಳೆ. ಅದಕ್ಕಾಗಿ ಅವಳು ತವರು ಮನೆಯಲ್ಲಿ ಆಸರೆ ಬಯಸಿ ಬಂದು ಅಲ್ಲಿಯೆ ವಾಸವಾಗಿರುತ್ತಾಳೆ. ಅತ್ತೆ ನಿರೂಪಕನ ಸ್ವಂತ ತಂದೆಯ ತಂಗಿ ಇರುತ್ತಾಳೆ. ತವರು ಮನೆಯಲ್ಲಿ ಅವಳು ರಕ್ತ ಹಂಚಿಕೊಂಡು ಹುಟ್ಟಿದವಳು, ತಮ್ಮ ಒಡಹುಟ್ಟಿದವಳು ಎನ್ನುವ ಕಾಳಜಿಯು ಇಲ್ಲದೆ ಅವಳ ಅಣ್ಣಂದಿರಾದ ನಿರೂಪಕನ ತಂದೆ ಮತ್ತು ಚಿಕ್ಕಪ್ಪ ಅವಳಿಗೆ ಹೊಡೆಯುತ್ತಾರೆ. ಅಲ್ಲದೆ ಬಾಯಿಗೆ ಬಂದ ಹಾಗೆ ಹೊಲಸು ಬಾಯಿಯಿಂದ ಬಯ್ಯುತ್ತಿರುತ್ತಾರೆ. ಅವಳಿಗೆ ಅವಾಚ್ಯ ಬೈಗಳುಗಳು ದಿನಾಲು ತಪ್ಪಿದ್ದಲ್ಲ. ಅಲ್ಲದೆ ಊರಲ್ಲಿ ಮತ್ತು ಓಣಿಯಲ್ಲಿಯು ಬಜಾರಿ ಹೆಂಗಸರು ಅವಳಿಗೆ ಚುಚ್ಚುಮಾತಿನಿಂದ ದಿನಾಲು ನೋಯಿಸುತ್ತಾ ಇರುತ್ತಾರೆ.

“ಗಂಡುನ್ ಬಿಟ್ ಬಂದಲ್ಲಾ ಮಿಂಡುನ್ ಎಲ್ ಕಳ್ಸಿದ್ದಿಯಮ್ಮಿ”[೬] ಎಂದು ಆ ಹೆಂಗಸರು ಮಾತಾಡುತ್ತಿರುತ್ತಾರೆ. ಒಂದು ದಿನ ಅತ್ತೆಯ ಅಕ್ಕ ಒಮ್ಮಿಂದ ಒಮ್ಮಲೆ ಬಂದು “ನೀನು ಬದುಕಬೇಕೆನ್ನುವ ವಾಂಚೆ ಇದ್ದರೆ ಗಂಡನ ಮನೆಗೆ ಹೋಗು”[೭] ಎಂದು ಖಡಾಖಂಡಿತವಾಗಿ ಹೇಳುತ್ತಾರೆ. ಆದರೆ ಅತ್ತೆ ಧೈರ್ಯಮಾಡಿ ಅವಳು ಸ್ವಲ್ಪ ಕಠೋರ ಮನಸ್ಸು ಮಾಡಿ ತನ್ನದು ಆ ಮನೆಯಲ್ಲಿ ಹಕ್ಕು ಇದೆ ಎಂದು ತೋರಿಸಿಕೊಡಲು ಅವರಿಗೆ ಮರಳಿ ಮಾತಾಡುತ್ತಾಳೆ. ಆಗದೆ ಹೋದರೆ ಹಲವಾರು ಹೊಲಸು ಬೈಗಳಗಳಿಂದ ಅವರನ್ನು ಬಯ್ಯುತ್ತಾಳೆ. ನನ್ ಕತ್ತು ಕೂದ್ರು ಸರಿಯೇ ನಾ ಮಾತ್ರ ಗಂಡುನ್ ಮನೆಗೆ ವೋಗೋದಿಲ್ಲ ಎಂದು ಅತ್ಯಂತ ಹಠದಿಂದ ವಾದಿಸುತ್ತಾಳೆ. ಅತ್ತೆ ದಿನಾಲು ಇಷ್ಟೆಲ್ಲ ಕಷ್ಟ. ಹಿಂಸೆಯನ್ನು ಅನುಭವಿಸಿದರೂ ಮತ್ತೆ ನಗುನಗುತ್ತಾ ಇರುತ್ತಾಳೆ.

ಹೀಗೆ ಮೊಗಳ್ಳಿಯವರ ಕಥನ ಜಗತ್ತಿನ ಸ್ತ್ರೀ ಪಾತ್ರಗಳು ತಮ್ಮೆಲ್ಲಾ ವೈವಿಧ್ಯತೆಯೊಂದಿಗೆ ಪ್ರಕಟಗೊಳ್ಳುತ್ತಿವೆ. ನಿಜವಾದ ದಲಿತ ಸ್ತ್ರೀಯರ ಸ್ವಭಾವ, ಪಾತ್ರಚಿತ್ರಣ, ಅವರ ತೊಳಲಾಟ, ಹತಾಶೆಗಳನ್ನು ಯಾವೊಬ್ಬ ಸ್ತ್ರೀ ಲೇಖಕಿಗಿಂತಲೂ ಸಮರ್ಥವಾಗಿ ಚಿತ್ರಿಸುತ್ತಾರೆ ಮೊಗಳ್ಳಿ.

### ೪.೨ ಬಾಲ್ಯದ ಪಾತ್ರಗಳು

ಮೊಗಳ್ಳಿಯವರು ತಮ್ಮ ಕಥೆಗಳಲ್ಲಿ ಹಲವಾರು ಬಾಲಕರ ಪಾತ್ರಗಳನ್ನು ರಚನೆ ಮಾಡಿದ್ದಾರೆ. ಬಾಲಕರಿರುವಾಗ ಅವರು ಎಂತಹ ಕೆಲಸ ಕಾರ್ಯಗಳನ್ನು ಮಾಡುತ್ತಾರೆ ಅವರ ಮನೋಸ್ಥಿತ ಹೇಗಿರುತ್ತದೆ, ಅವರನ್ನು ಸಮಾಜದಲ್ಲಿ ಯಾವ ತೆರನಾಗಿ ಗುರುತಿಸಲಾಗುತ್ತದೆ ಎಂದು ಆ ಪಾತ್ರಗಳ ಮೂಲಕ ತೋರಿಸಿಕೊಡುತ್ತಾರೆ. ಅವರ ಕಥೆಗಳಲ್ಲಿ ಅವುಗಳದೆ ಒಂದು ಲೋಕವಾಗಿ ಬಾಲಕರ ಪಾತ್ರಲೋಕ ಕಂಡುಬರುತ್ತದೆ. ಅವರನ್ನು ಪರಿಚಯ ಮಾಡಿಕೊಳುವುದು ಇಲ್ಲಿಯ ಉದ್ದೇಶವಾಗಿದೆ.

ಏನು ಅರಿಯದ ಮಗು ಮನೆಯಲ್ಲಿ ತಂದೆ ತಾಯಿಗಳು ಜಗಳವಾಡಿದಾಗ ಅದರ ಕಡೆ ಯಾರು ಗಮನಕೊಡದೆ ಇರುವಾಗ ಅದು ಅಪಘಾತಕ್ಕೆ ಗುರಿಯಾಗುತ್ತದೆ. ದೊಡ್ಡವರ ಸಣ್ಣತನಗಳಲ್ಲಿ ಮಗುವೆಂದು ಬಲಿಯಾಗುತ್ತದೆ. ಈ ವಸ್ತುವನ್ನು ಹೊಂದಿದ ಒಂದು ಹಳೆಯ ಚಡ್ಡಿ ಕಥೆಯಲ್ಲಿ ಬರುವ ಸಿನಿ ಎಂಬ ಬಾಲಕನ ಪಾತ್ರದ ಮೂಲಕ ತೋರಿಸಿಕೊಡುತ್ತಾರೆ. ಸಿನಿಯು ಇಲ್ಲಿ ಚಡ್ಡಿ ಹಾಕಿಕೊಳ್ಳದೆ ಮದುವೆ ಮನೆಯಲ್ಲಿ ಓಡಾಡುತ್ತಾ ಇರುತ್ತದೆ. ಮೊಗಳ್ಳಿಯವರ ಮೊದಲ ಕಥೆಯೆಂಬುದು ಗಮನಿಸಬೇಕಾದ ಸಂಗತಿ. ಸ್ವತಃ ಅವರೆ ಸಂದರ್ಶನದಲ್ಲಿ ಹೇಳಿರುವಂತೆ ಈ ಕಥೆ ಬರೆದದ್ದೇ ಒಂದು ಆಕಸ್ಮಿಕ. ಅದು ಪ್ರಕಟಗೊಂಡದ್ದೂ ಆಕಸ್ಮಿಕವೇ.

ಆ ಅಳೂ ಈಗಲೂ ಅಲ್ಲಿ ಎನ್ನುವ ಮತ್ತೊಂದು ಕಥೆಯಲ್ಲೂ ಮೊಗಳ್ಳಿಯವರು ಬಾಲಕನ ಪಾತ್ರವನ್ನು ಸೃಷ್ಟಿಸಿರುತ್ತಾರೆ. ಈ ಕಥೆಯ ಹೂವ ಎನ್ನುವ ಬಾಲಕನ ಪಾತ್ರದ ಮೂಲಕ ಚಿತ್ರಿಸಿದ್ದಾರೆ. ಹೂವ ಎದ್ದಕೂಡಲೆ ಅಳುವುದಕ್ಕೆ ಪ್ರಾರಂಭಮಾಡಿದವನು ಸಂಜೆ ಮರುದಿವಸವಾದರೂ ಅಳು ನಿಲ್ಲಿಸುವುದಿಲ್ಲ. ಸತತವಾಗಿ ಅಳುತ್ತಲೇ ಇರುತ್ತದೆ. ಯಾರಿಗೂ ಅವನ ಅಳುವಿನ ಕಾರಣ ಗೊತ್ತಾಗುವುದಿಲ್ಲ. ಅದು ಹಲವಾರು ಪ್ರಕಾರವಾಗಿ ಅಳುತ್ತಾ ಹೋಗುತ್ತದೆ. ಧ್ವನಿಯನ್ನು ಏರಿಳಿದ ದೀರ್ಘ ಉಸಿರು ಬಿಡುತ್ತಾ ಮುಸ ಮುಸನೆ ಅಳುತ್ತದೆ. ಹೂವನ ಅಳುವನಿಂದ ಮನೆಯಲ್ಲಿ ಎಲ್ಲರಿಗೂ ಬೇಸರವಾಗುತ್ತದೆ. ಪಕ್ಕದವರಿಗೂ ಕೂಡಾ ಅದು ಬೇಸರವನ್ನುಂಟು ಮಾಡುತ್ತದೆ. ಹೀಗೆ ಅವನ ಅಳುವಿನ ಬಗ್ಗೆ ಪ್ರಶ್ನೆಯಾಗಿ ಕಾಡಲಿಕ್ಕೆ ಶುರುವಾಗುತ್ತದೆ. ಅದಕ್ಕೆ ದೆವ್ವ ಬಂದಿದೆಯೋ ಎಂದು ಸ್ವಲ್ಪ ಜನ ಅಂದರೆ ದೇವರು ಬಂದಿದೆ ಎಂದು ಇನ್ನು ಕೆಲವರು ಸಂಶಯ ಪಡುತ್ತಾರೆ. ದೆವ್ವವಿದೆ ಎಂದಾಗ ಹೂವ ಇನ್ಮೇಲೆ ನಾ ಅಳೋದಿಲ್ಲ ಮಲುತಕೆ ವೊಯ್ತೀನಿ ಎಂದು ಮಾತು ಕೊಡುತ್ತದೆ. ಆಮೆಲೆ ಯಾವುದೂ

ಯಮದೂತ ಕಾಣತಾನೆ ಕರೀತಾನೆ ಎಂದು ಏನೇನೊ ಕಥೆ ಕಟ್ಟಿ ಹೇಳುತ್ತದೆ. ಇದು ಆಟ ಆಡುವಾಗ ಮಕ್ಕಳಿಗೆ ಯಮದೂತನ ಕಥೆ ಹೇಳಿದಾಗ ಅದನ್ನು ನೆನಪಿಸಿಕೊಂಡು ಹೂವ ಅಳುತ್ತಿರಬಹುದು ಎಂದು ಅಂದುಕೊಳ್ಳುತ್ತಾರೆ. ಆದರೂ ಅದು ನಿಜವಾಗದೆ ಮತ್ತೆ ಅಳುತ್ತದೆ. ಆವಾಗ ಇದಕ್ಕೆ ದೇವರಿದೆ ಎಂದು ಸಂಶಯ ಪಡುತ್ತಾರೆ. ಅದು ನಿಜವಾದಲ್ಲಿ ಕೊನೆಗೆ ಹೂವನಿಗೆ ದೃಷ್ಟಿ ಬಂದಿದೆ ಅದನ್ನು ಬಿಡಿಸಲು ಕರೆದುಕೊಂಡು ಹೋಗಿ ಅದನ್ನು ಬಿಟ್ಟು ಓಡಿಸಲು ಅವನಿಗೆ ಮನಸ್ಸಿಗೆ ಬಂದ ಹಾಗೆ ಹೊಡೆಯುತ್ತಾರೆ. ಅಪ್ಪೋ ವಡೀ ಬ್ಯಾಡ ಸತ್ತೋಯ್ತೀನಿ ನೀನೇಳ್ದಂಗೆ ಕೇಳ್ತೀನಿ ವಡೀಬ್ಯಾಡ ಸತ್ತೋಯ್ತೀನಿ ನೀನೇಳ್ದಂಗೆ ಕೇಳ್ತೀನಿ ವಡೀ ಬ್ಯಾಡ, ಬಿಟ್ ಬಿಡು ಎಂದು ಅನ್ನುತ್ತಲೆ ಕೊನೆಗೆ ದೆವ್ವ ಬಿಡಿಸುವ ನೆಪದಲ್ಲಿ ಹೂವನ ಕೂದಲು ಅವರ ಅಪ್ಪನ ಕೈಯಲ್ಲಿ ಕಿತ್ತುಬರುತ್ತವೆ. ಈ ನೋವಿನಿಂದ ಹೂವ್ವ ಪ್ರಜ್ಞೆ ತಪ್ಪುತ್ತಾನೆ. ಉಸಿರೆ ಆಡುವುದಿಲ್ಲ. ಹೀಗೆ ಒಂದು ಬಾಲಕ ಏನು ಅರಿಯದೆ ಅತ್ತು ಅತ್ತು ಹಲವಾರು ಕಾರಣಗಳಿಗೆ ಬಲಿಯಾಗಿ ಅನ್ಯಾಯವಾಗಿ ಪ್ರಾಣಕೊಡುತ್ತಾನೆ.

ಮೊಗಳ್ಳಿಯವರ ಬುಗುರಿ ಕಥೆಯು ಇಂತಹ ಬಾಲ್ಯದ ಕಥಾವಸ್ತುವನ್ನು ಒಳೊಂಡುದಾಗಿದೆ. ಆಟ ಆಡುತ್ತ ಚೆಲುವ ತನ್ನ ಬುಗುರಿಯನ್ನು ಮಲದ ಗುಂಡಿಯಲ್ಲಿ ಬೀಳಿಸಿರುತ್ತಾನೆ. ಅದನ್ನು ಕಂಡು ಬೆಚ್ಚಿ ನಿಲ್ಲುತ್ತಾನೆ.ಅದನ್ನು ಹೇಗಾದರೂ ಮಾಡಿ ಮರಳಿ ಪಡೆಯಬೇಕು ಎಂದು ಆಸೆ ಪಡುತ್ತಾನೆ. ಆದರೆ ಅದು ಅಸಾಧ್ಯವಾಗುತ್ತದೆ. ತನ್ನ ಮಗುವಿನ ದೃಷ್ಟಿಯಿಂದಲೆ ದೊಡ್ಡವರ ಕ್ರಿಯೆಗಳನ್ನು ಗಮನಿಸುತ್ತಾ ಹೋಗುತ್ತಾನೆ. ಆದರೆ ಅವನ ಮನಸ್ಥಿತಿಯನ್ನು ಯಾರೂ ಅರ್ಥಮಾಡಿಕೊಳ್ಳುವುದಿಲ್ಲ. ಅವನ ಮಾತನ್ನು ಸಹನೆಯಿಂದ ಯಾರೂ ಆಲಿಸುವುದಿಲ್ಲ. ಹೀಗೆ ಹೇಲುಗುಂಡಿಗೆ ಬಿದ್ದ ಬುಗುರಿಯನ್ನು ಪಡೆಯಬೇಕು ಎಂದು ಆಸೆಪುಡುವುದು ಅವನು ಅದಕ್ಕೆ ಕೊಟ್ಟ ಪ್ರಾಮುಖ್ಯತೆ ಎಂತದು ಎಂದು ತಿಳಿಯುತ್ತದೆ. ಹೀಗೆ ಬುಗುರಿ ಕಥೆಯಲ್ಲಿ ಚೆಲುವನ ಪಾತ್ರ ಕಂಡುಬರುತ್ತದೆ.

ಸಾಮಾಜಿಕ ಅಸಮಾನತೆಯು ಮಕ್ಕಳ ಮೇಲೂ ಪರಿಣಾಮ ಬೀರುತ್ತದೆ, ಅಂತಹ ಒಂದು ಪ್ರಯೋಗ ಅವರ ಮೇಲೆ ನಡೀತಾ ಇರುತ್ತದೆ ಎಂದು ಮೊಗಳ್ಳಿಯವರು ಪಟೇಲ ಕಥೆಯಲ್ಲಿ ಕಥೆಯ ಸುಪ್ತಪಾತ್ರವಾದ ನಿರೂಪಕನ ಪಾತ್ರದ ಮೂಲಕ ತೋರಿಸುತ್ತಾರೆ. ಇಲ್ಲಿ ನಿರೂಪಕನು ಪ್ರಾಥಮಿಕ ಶಾಲೆಯಲ್ಲಿ ಮುಂದೆ ಬರುವುದನ್ನು ಊರಿನ ಮೇಲ್ಜಾತಿಯ ಪಟೇಲನಿಗೆ ಸಹಿಸಿಕೊಳ್ಳುವುದು ಆಗುವುದಿಲ್ಲ. ಆದರೆ ಅವನು ಅದಕ್ಕೆ ಏನು ಮಾಡಬೇಕು ಎಂದು ಗೊತ್ತಾಗದೆ ನಿರೂಪಕನಿಗೆ ಮಲದ ಲೇಪನವನ್ನು ಮಾಡುತ್ತಾನೆ. ಆದರೂ ನಿರೂಪಕನು ಸಮಾಜದಲ್ಲಿ ಮುಂದೆ ಬರುತ್ತಾನೆ.

ಹೀಗೆ ಮೊಗಳ್ಳಿಯವರ ಅವರ ಹಲವಾರು ಕಥೆಗಳಲ್ಲಿ ಬಾಲಕರ ಪಾತ್ರವನ್ನು ಸೃಷ್ಟಿ ಮಾಡಿ ಬಾಲಕರ ಜೀವನ ಹೇಗಿರುತ್ತದೆ ಎಂದು ತೋರಿಸಿಕೊಟ್ಟಿದ್ದಾರೆ.

### ೪.೩ ಪ್ರಾಣಿ ಲೋಕ

ಮೊಗಳ್ಳಿಯವರ ಕಥನ ಜಗತ್ತು ವಿಶಿಷ್ಟವಾಗಿದ್ದು, ಅವರು ಮನುಷ್ಯ ಪಾತ್ರಗಳನ್ನು ಚಿತ್ರಿಸುವ ಹಾಗೆಯೇ ಪ್ರಾಣಿಪ್ರಪಂಚವನ್ನೂ ಚಿತ್ರಿಸುತ್ತಾರೆ. ಅವರ ರೂಪಕ ಮತ್ತು ಚಿತ್ರಕಶಕ್ತಿಯಿಂದಾಗಿ ಈ ಬಗೆಯ ಕಥಾನಕವು ಓದುಗರಿಗೆ ಚೇತೋಹಾರಿ ಅನುಭವವನ್ನು ನೀಡುತ್ತದೆ. ಈ ಬಗೆಯ ಕಥನ ಕ್ರಮವು ಜಗತ್ತಿನ ಪ್ರಾಚೀನ ಕಾಲದಿಂದಲೂ ಇದ್ದು, ಭಾರತೀಯ ಪರಂಪರೆಯಲ್ಲಿ ಪಂಚತಂತ್ರ ಕಥೆಗಳನ್ನು ಇದಕ್ಕೊಂದು ಉತ್ತಮ

ನಿದರ್ಶನವನ್ನಾಗಿ ನೀಡಬಹುದು. ಮೊಗಳ್ಳಿಯವರು ಬಹುತೇಕ ಕಥೆಗಳಲ್ಲಿ ಪ್ರಾಣಿ ಜಗತ್ತನ್ನು ಮನುಷ್ಯ ಜಗತ್ತಿನಂತೆಯೇ ನೈಜವಾಗಿ ಚಿತ್ರಿಸಿದ್ದಾರೆ. ಅವಕ್ಕೆ ಮಾನವ ಸಹಜ ಗುಣಗಳೆಲ್ಲವೂ ಇರುತ್ತವೆ. ಉದಾಹರಣೆಗೆ ಅನಾದಿ ಕಾದಂಬರಿಯ ಈ ಪಾತ್ರ ಚಿತ್ರಣವನ್ನು ನೋಡಬಹುದು.

> ಅಗಸರ ಕತ್ತೆಗಳು ಊರ ಕೆರೆ ಬಯಲಿಗೆ ಬಂದು ತಮ್ಮ ಮುದಿಬಾಯಿಗೆ ಸಿಕ್ಕಿದ್ದನ್ನು ತಿಂದು ಏರಿ ಮೇಲೆ ಕೆಡೆದುಕೊಂಡು ಕಷ್ಟಸುಖ ಮಾತನಾಡುತ್ತಿದ್ದವು. ದುಡಿದು ಹಣ್ಣಾಗಿ ಸಾವಿನಂಚಿಗೆ ಬಂದು ನಿಂತ ಕತ್ತೆಗಳು ಯಾರಿಗೂ ಬೇಡವಾಗಿದ್ದವು. ಎಮ್ಮೆಯೋ ದನವೋ ಆಗಿದ್ದರಾದರೂ ವಾಸಿಯಾಗಿತ್ತು. ಕತ್ತೆಗಳ ಜನ್ಮವೆತ್ತಿ ಈ ಪಾಡು ಪಡಬೇಕಾಯಿತಲ್ಲಾ ಎಂದು ಒಂದು ಕಣ್ಣನ್ನು ಕಳೆದುಕೊಂಡಿದ್ದ ಕತ್ತೆಯು ತೀರಾ ಮುದಿಯಾಗಿದ್ದ ಇನ್ನೊಂದು ಕತ್ತೆಯ ಜೊತೆ ವಿಷಾದ ಪಡುತ್ತಿತ್ತು. ಯಾವುದೇ ಜನ್ಮವೆತ್ತಿದರೂ ಮನುಷ್ಯರ ದರ್ಪದಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಎಂದು ಮುದಿ ಕತ್ತೆಯು ತನ್ನ ಒಡೆಯನು ದಂಡಿಸುತ್ತಿದ್ದುದನ್ನೆಲ್ಲಾ ನೆನೆದು; ದೇವರು ಒಂದು ಬಾರಿ ನಮ್ಮ ಜನ್ಮ ಅವತರಿಸಿ ಬಂದು ಈ ನರನ ದೌರ್ಜನ್ಯದ ರುಚಿ ನೋಡಿದರೆ ಮಾತ್ರ ತಮ್ಮ ಕಷ್ಟ ಆತನಿಗೆ ತಿಳಿಯುವುದು ಎಂದು ಬೇಸರ ಪಡುತ್ತಿತ್ತು. ಕತ್ತೆಗಳ ಗೋಳು ಯಾವತ್ತೂ ಮುಗಿಯುತ್ತಿರಲಿಲ್ಲ. ಕೆರೆ ಏರಿಯ ಬುಡದಲ್ಲಿದ್ದ ಮುಳ್ಳಿನ ಮರದಲ್ಲಿ ಗೂಡು ಕಟ್ಟಿ ಹಾಯಾಗಿದ್ದ ಗೀಜಗನ ಹಕ್ಕಿಗಳು ಒಂದೇ ಸಮನೆ ಹಾಡು ಹೇಳುತ್ತಿದ್ದವು. 'ಹೀಗೆ ಹಾಡ್ತಾ ಹಾರಾಡ್ತಾ ಇರಿ, ಬೇಟೆಗಾರ ಬರ್‍ತಾನೆ' ಎಂದು ಕತ್ತೆಯು ಆ ಹಕ್ಕಿಗಳ ಸುಖ ಎಷ್ಟುಮಾತ್ರದ್ದು ಎಂದು ಎಚ್ಚರಿಸುತ್ತಿತ್ತು. ಕೆರೆಯ ನೀರಿನಲ್ಲಿ ಹಾಡುತ್ತಾ ನೀರಕ್ಕಿಗಳ ಕಲರವ ಗಾಳಿಯಲ್ಲಿ ತೇಲಿ ಹೋಗುತ್ತಿತ್ತು. ದನ ಕರುಗಳು ಕೊಯ್ದ ಗದ್ದೆಗಳ ತೆವರಿಯ ಹಸಿರು ಹುಲ್ಲನ್ನು ನಿಧಾನದಲ್ಲಿ ಮೇಯುತ್ತಿದ್ದವು. ಸುಗ್ಗಿಯ ಕೆಲಸ ಮುಗಿಸಿ, ಸದ್ಯ ಮಣಭಾರದ ಹೊರೆ ಕೆಲಸ ಈಗ ಇಲ್ಲವಲ್ಲ ಎಂದು ಅವು ಬೆತ್ತಲಾದ ಬಯಲಲ್ಲಿ ಅಡ್ಡಾಡುತ್ತಿದ್ದವು.
>
> ಕತ್ತೆಗಳು ಭಯದಲ್ಲೇ ನಿಂತಿದ್ದವು. ನವೀನನ ಕೀಟಲೆ ತಪ್ಪಿತ್ತಾದರೂ ಕೆಂಚವ್ವನ ಭಯ ತಪ್ಪಿರಲಿಲ್ಲ. ಅವುಗಳ ಬಾಯಿ ಒಣಗಿತ್ತು. ಕಟ್ಟೆ ಕಡೆ ಹೋಗಿ ದಾಹ ಇಂಗಿಸಿಕೊಳ್ಳುವ ಎಂದು ಅಲ್ಲಿಗೆ ಹೋದವು. ಕುದುರೆಗಳಾಗಲೇ ನೀರು ಕುಡಿದು ಮರದ ನೆರಳಲ್ಲಿದ್ದವು. ಮುದಿ ಕತ್ತೆಗಳಿಗೆ ಅವನ್ನು ನೋಡಿ ವಿಪರೀತ ಸಿಟ್ಟು ಬಂತು.
>
> 'ಏನ್ರಮ್ಮಾ ಅಂತಾ ಕೆಲ್ಸ ಮಾಡುಬುಟ್ಟು ಲೋಲಾ ಅಂತಾ ಇಲ್ಲಿ ಬಂದು ಹಾಯಾಗಿ ಕೆಡಕಂದಿದ್ದಿರಲ್ಲಾ ಇನ್ನೆಲ್ಲು ಜಾಗ ಇರ್‍ಲಿಲ್‌ವೇ ನಿಮಗೆ. ಕೆಂಚವ್ವ ಬಂದು ಇತ್ಲ ಇಂಗೆ ತುಳುದು ಗಿಡ ಮುರ್‍ದು ಹಾಳ್ ಮಾಡಿದ್ದಿರಲ್ಲಾ ಅಂತಾ ನಮಗೆ ವಡುದ್ರೆ ಏನ್ ಮಾಡ್ಸ. ನಿಮ್ಮಿಂದ ಯಾವತ್ತೂ ಇಂತಾ ಅನ್ನಾಯನೇ

ಆಗೋಯ್ತಲ್ಲಾ. ಎಲ್ಲಾರಾ ಹಾಳಾಗೋಗಿ' ಎಂದು ಮುದಿ ಕತ್ತೆಗಳೆರಡೂ ಏಕಾಭಿಪ್ರಾಯದಲ್ಲಿ ರೇಗಿದವು. ಸುಂದರಿ ಕುದುರೆ ತನಗೆ ಯಾವ ಪ್ರಿಯಕರನೂ ಇಲ್ಲವಲ್ಲಾ ಎಂಬ ನೋವಿನಲ್ಲಿದ್ದುದು ಕತ್ತೆಗಳ ಸಿಟ್ಟಿನಿಂದ ಅದಕ್ಕೂ ವಿಪರೀತ ಕೋಪ ಬಂದಿತ್ತು. 'ಅಯ್ಯಯ್ಯೋ ಮುದಿ ಕತ್ತೆ ಮುಂಡೇರಾ, ನಾವ್ಯಾಕೆ ಎಲ್ಲಾರಾ ಹಾಳಾಗೋಗ ಬೇಕೂ. ನೀವೇ ಎಲ್ಲಾರ ವೋಗಿ ನೆಗುದು ಬಿದ್ದು ಸಾಯ್ರಿ. ಊರು ಹೋಗು ಅಂತದೇ ಕಾಡು ಬಾ ಅಂತದೇ ಅಂತಾ ಮುದಿಯಾಗಿ ಗತಿಗೆಟ್ಟಿರುದು ನೀವು. ಕೆಂಚವ್ವ ಇತ್ಲಾ ನಿಮಗೇ ಅಂತಾ ಬರ್ದು ಕೊಟ್ಟಿದ್ದಾಳೇನು? ಭೂಮಿ ಮ್ಯಾಲೆ ಎಲ್ ಬೇಕಾದ್ರೂ ನಾವು ತಿರುಗ್ತೀವಿ ಮಲಗ್ತೀವಿ ಕೆಡಕತಿವಿ. ಅದಾ ಕೇಳುಕೆ ನೀವ್ಯಾರು' ಎಂದು ಕೆನೆದು ಕೂಗಿತು.

ಕತ್ತೆಗಳ ಬಾಯೇನು ಕಡಿಮೆ ಇರಲಿಲ್ಲ. 'ಲೇ ನನ್ ಸವತೀರಾ ಗತಿಗೆಟ್ಟಿರುದು ನೀವು ಕನ್ರೇ. ಊರೂರ್ ತಿರುಗೊ ನಿಮಗೆ ಇಷ್ಟೊಂದು ಜಂಬಾ ಆದ್ರೇ ನಾವಿನ್ನೆಷ್ಟು ಮಾಡಬೇಕ್ರೇ, ಗತಿಗೆಟ್ಟ ಅಮಾಸೆ ಜೊತೆ ಬದ್ಕುವ ನಿಮ್ದೋ ಒಂದು ಬಾಳೇನ್ರೇ' ಎಂದು ಕರ್ಕಶವಾಗಿ ಕಿರುಚಿದ್ದವು.

ಸುಂದರಿ ಕುದುರೆಯ ಸ್ವಾಭಿಮಾನ ಕೆರಳಿತ್ತು. 'ಲೇ ನಿನ್ನ ಯೋಗ್ಯತೆ ಏನು ಅಂತಾ ನನಗೆ ಗೊತ್ತಿಲ್ವೇನೇ ಮುದಿ ಮೂದೇವಿ. ಮುಚ್ಚೇ ನಿನ್ನ ಹೊಲಸು ಬಾಯಾ. ಬೀದ್ ಬೀದಿಲಿ ಬಿದ್ದಿರು ಕಸ ತಿನ್ಕಂದು ಬೀದಿ ಪಾಲಾಗಿರು ಬಿಕಾರಿ ಕಣೇ ನೀನೂ' ಎಂದು ನಾಟ್ಯರಾಣಿಯಂತೆ ಸುಂದರಿ ಕುದುರೆಯು ಬಾಲ ತಿರುಗಿಸಿ ಕೊಂಡಿತು. ಮತ್ತೊಂದು ಕುದುರೆಯು ಮುಂದುವರೆಸಿ; 'ನಾವೂ ರಾಜಾಧಿ ರಾಜರನ್ನೆ ಹೊತ್ತು ಮೆರ್ಸಿರೋರ ವಂಶದಿಂದ ಹುಟ್ಟಿ ಬಂದಿರೋರು ಅನ್ನೋದಾ ತಿಳಕೊಂಡು ಮಾತಾಡೀ' ಎಂದಿತು. ಕತ್ತೆಗಳು ಕೈ ಕಾಲು ಮಿಲಾಯಿಸಿ ಕಾಳಗಕ್ಕೆ ಇಳಿಯುವಂತಿರಲಿಲ್ಲ. ವಿಕಾರವಾಗಿ ಕಿರುಚಿಕೊಂಡು ಬಡಬಡಿಸಿದವು. ಧೂಳೆಬ್ಬಿಸಿ ವದ್ದಾಡಿದವು. ನಮ್ಮ ಶಾಪ ನಿಮಗೆ ತಟ್ಟದೇ ಬಿಡುವುದಿಲ್ಲ ಎಂದು ಕಿಡಿಕಾರಿದವು. ಅಂತೂ ಕೊನೆಗೆ ಮುದಿ ಕತ್ತೆಗಳ ಜೊತೆ ಬೈಯ್ದಾಡುವುದು ಸಾಕಾಗಿ; ತಥ್ ಇಂತಾ ಹೇಸಿಗೆ ಕತ್ತೆಗಳ ಜೊತೆ ಗುದ್ದಾಟವೇಕೆಂದು ಕುದುರೆಗಳು ಸುಮ್ಮನಾದವು. ಅಷ್ಟೊತ್ತಿಗಾಗಲೆ ಎಮ್ಮೆಗಳು ಕಟ್ಟೆಯ ಒಳಗೆ ಇಳಿದು ನೀರೆಲ್ಲವನ್ನು ಬಗ್ಗಡ ಮಾಡಿದ್ದವು. ಮುದಿ ಕತ್ತೆಗಳ ಗಂಟಲು ಜಗಳದಿಂದ ಮತ್ತಷ್ಟು ಒಣಗಿ ಹೋಗಿತ್ತು. ಕುದುರೆಗಳು ಊರ ಕಡೆ ಹೊರಟು ಹೋದವು. ಬಾಯಾರಿದ ಕತ್ತೆಗಳು ಬಗ್ಗಡದ ನೀರನ್ನೆ ಕುಡಿದು ದಿಕ್ಕೆಟ್ಟು ಅಲ್ಲೇ ಇದ್ದ ಮರದ ಕೆಳಗೆ ಕೆಡೆದುಕೊಂಡವು.

ಹೀಗೆ ಮೊಗಳ್ಳಿಯವರ ಕಥನ ಜಗತ್ತು ವಿಶಿಷ್ಟವಾಗಿದ್ದು, ಅವರು ಮನುಷ್ಯ ಪಾತ್ರಗಳನ್ನು ಚಿತ್ರಿಸುವ ಹಾಗೆಯೇ ಪ್ರಾಣಿಪ್ರಪಂಚವನ್ನೂ ಚಿತ್ರಿಸುತ್ತಾರೆ. ಅವರ ರೂಪಕ ಮತ್ತು ಚಿತ್ರಕಶಕ್ತಿಯಿಂದಾಗಿ ಈ ಬಗೆಯ ಕಥಾನಕವು ಓದುಗರಿಗೆ ಚೇತೋಹಾರಿ ಅನುಭವವನ್ನುಂಟು ಮಾಡುತ್ತದೆ.

### ೪.೪. ದಲಿತೇತರ ಪಾತ್ರಗಳು

ಮೊಗಳ್ಳಿಯವರ ಕಥೆಗಳಲ್ಲಿ ದಲಿತ ಪಾತ್ರಗಳ ಜೊತೆಗೆ ಹಲವಾರು ದಲಿತೇತರ ಪಾತ್ರಗಳು ಕಂಡುಬರುತ್ತವೆ. ಅವರು ಸೃಜಿಸಿದ ದಲಿತೇತರ ಪಾತ್ರಗಳು ಸ್ವಭಾವ ಚಿತ್ರಣದಲ್ಲಿಯೇ ಅವುಗಳ ವೈಶಿಷ್ಟ್ಯವನ್ನು ಪ್ರತಿಬಿಂಬಿಸುತ್ತಾ ಹೋಗುತ್ತಾರೆ. ಇವರ ದಲಿತೇತರ ಪಾತ್ರಗಳೆಲ್ಲಾ ನಾಗರೀಕತೆಯ ಸಂಪರ್ಕವುಳ್ಳ ಮಧ್ಯಮವರ್ಗದ ಸುಶಿಕ್ಷಿತರು. ಹಳ್ಳಿಯಲ್ಲಿ ತಮ್ಮ ಪ್ರಾಬಲ್ಯದಿಂದ ಮೆರೆಯುವ ಗೌಡ, ನಾಯಕ, ಯಜಮಾನರುಗಳು. ಒಟ್ಟು ಅವರ ಕಥೆಗಳನ್ನು ಗಮನಿಸಿದರೆ ಅನಕ್ಷರಸ್ಥರು ಅಕ್ಷರಸ್ಥರು, ಕೆಲಸ ಕಾರ್ಯಗಳಿಲ್ಲದ ಅಲೆಮಾರಿಗಳ ಹಾಗೆ ಜೀವನ ಮಾಡುವ ಎರಡು ಮೂರು ಪಾತ್ರಗಳು ದೊರೆಯುತ್ತವೆ. ಮೊಗಳ್ಳಿಯವರು ತಮ್ಮ ಕಥೆಗಳಲ್ಲಿ ಸೃಷ್ಟಿಸಿದ ದಲಿತೇತರ ಪಾತ್ರಗಳಲ್ಲಿ ವೈಶಿಷ್ಟ್ಯವನ್ನು ವೈವಿಧ್ಯವನ್ನು ಗಮನಿಸಬಹುದು. ಮೊಗಳ್ಳಿಯವರು ಇಂತಹ ಪಾತ್ರಗಳ ಸಾಮಾಜಿಕ, ಆರ್ಥಿಕ ಸಂಗತಿಗಳ ಹಿನ್ನೆಲೆಯಲ್ಲಿ ಅವುಗಳ ಸಂಘರ್ಷವನ್ನು ಅತ್ಯಂತ ಶಕ್ತಿಯುತವಾಗಿ ಚಿತ್ರಿಸುತ್ತಾರೆ.

ಉದಾಹರಣೆಗೆ, 'ತೋಪು' ಕಥೆಯ ಸುಬ್ಬೇಗೌಡ 'ದಿಬ್ಬದ ಕತ್ತಲಲ್ಲಿ ಇಳಿದು' ಕಥೆಯ ಪೂಜಾರಿ, ಭೂಮಿ ಕಥೆಯ ನಾಯಕ ಮುಂತಾದವರು. ಇವರ ಹೋರಾಟಗಳನ್ನು ಚಿತ್ರಿಸುವಲ್ಲಿ ಅವುಗಳ ಹಿನ್ನೆಲೆಯಲ್ಲಿ ನಡೆಯುವ ಕ್ರೌರ್ಯ, ಶೋಷಣೆಗಳನ್ನು ಯಾವುದೇ ಅಬ್ಬರವಿಲ್ಲದೆ ಕಲಾತ್ಮಕ ನೆಲೆಯಲ್ಲಿ ಚಿತ್ರಿಸುತ್ತಾರೆ.

ಅವರ ದಲಿತೇತರ ಪಾತ್ರಗಳು ಪ್ರಮುಖವಾಗಿ ದರ್ಪ ಗತ್ತು ಗಮ್ಮತ್ತು ನ್ಯಾಯ ಅನ್ಯಾಯಗಳ ಮೂರ್ತ ರೂಪ. ಅವುಗಳಿಂದಲೇ ಅವರ ಸಮಸ್ಯೆಗಳು ಉದ್ಭವಿಸುತ್ತವೆ. ಅವುಗಳೆ ಅವರ ಅಟ್ಟಹಾಸಕ್ಕೆ ಕಾರಣಗಳು. ಇವರ ಹಲವಾರು ಕಥೆಗಳಲ್ಲಿ ಬರುವ ಹೆಚ್ಚು ಪಾತ್ರಗಳು ದಲಿತೇತರ ಪಾತ್ರಗಳಾಗಿವೆ. ಆದರೆ ಪ್ರಮುಖವಾದವುಗಳನ್ನು ಮಾತ್ರ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಇವರ ದಲಿತೇತರ ಪಾತ್ರಳನ್ನು ಮೂರು ವರ್ಗಗಳನ್ನಾಗಿ ವಿಂಗಡಿಸಬಹುದು. ೧. ಮೇಲ್‌ರಚನೆಯ ಮೇಲ್ಜಾತಿಯ ಶೋಷಕ ವರ್ಗ. ಉದಾಹರಣೆಗೆ ತೋಪು ಕಥೆಯ ಸುಬ್ಬೇಗೌಡು, ಭೂಮಿ ಕಥೆಯ ನಾಯಕ, ಕೊಂಡ ಕಥೆಯ ಗೌಡ, ಆ ಹೆಂಗಸು ಮತ್ತುದಿಬ್ಬದ ಕತ್ತಲಲ್ಲಿ ಇಳಿದ ಕಥೆಯ ಪೂಜಾರಿಗಳು. ೨. ಮಧ್ಯಮ ಕುಟುಂಬದ ವಿದ್ಯಾವಂತ ಉದ್ಯೋಗಸ್ಥ ವರ್ಗ ಉದಾಹರಣೆಗೆ ರೈಲು ಜನ ಕಥೆಯ ಗುರುವ, ಮಣ್ಣು ಕಥೆಯ ಯಶವಂತ, ಕೋಮಲಕಾಯ ಮತ್ತು ಪಟೇಲ ಕಥೆಯ ಹೆಡ್‌ಮಾಸ್ಟರ್‌ಗಳು, ಮೋಜು ಕಥೆಯ ಪೋಲೀಸ್ ಪಾಪಣ್ಣ ೩. ಅಕ್ಷರಸ್ಥ ಮತ್ತು ಅನಕ್ಷರಸ್ಥ ನಿರೋದ್ಯೋಗ ವರ್ಗ. ಉದಾಹರಣೆಗೆ ಮೃಗ ಜಲ ಕಥೆಯ ನೃತತುಂಗ, ಗಂಟೆ ಜೋಗಿ ಕಥೆಯ ಗಂಟೆ ಜೋಗಿ, ಜೀವ ಕಥೆಯ ಭಿಕ್ಷುಕ ಇತ್ಯಾದಿ.

ತೋಪು ಕಥೆಯಲ್ಲಿ ಬರುವ ದಲಿತೇತರ ಪಾತ್ರಗಳು ಸಾಮಾನ್ಯವಾಗಿ ಮೇಲು ಜಾತಿ ಮತ್ತು ಮೇಲ್ವರ್ಗದ ಪಾತ್ರಗಳಾಗಿವೆ. ತಾವು ಮಾಡಿದ್ದೇ ಶ್ರೇಷ್ಠ, ತಮ್ಮ ಮಾತನ್ನೇ ಇನ್ನುಳಿದವರು ಕೇಳಬೇಕು, ತಮ್ಮ ಆಸೆ ಆಕಾಂಕ್ಷೆಗಳಿಗೆ ಮೊದಲ ಆದ್ಯತೆ ಎಂಬ ಮನೋಭಾವದ ಪಾತ್ರಗಳು. ಈ ಕಥೆಯಲ್ಲಿ ಸುಬ್ಬೇಗೌಡ ಒಬ್ಬ ಊರಿನ ಆಡಳಿತವನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಮೆರೆಯುವವನು. ಕೇರಿಯ ಮತ್ತು ಊರಿನ ಸಾಮಾನ್ಯ ಜನರಿಗೆ ಮೋಸ ವಂಚನೆಗಳನ್ನು ಮಾಡುತ್ತಾ ಅವರನ್ನು ಎಡಪಂಥೀಯರನ್ನಾಗಿ ನೋಡಿಕೊಳ್ಳುತ್ತಾನೆ. ಅಲ್ಲದೆ ತಾಯವ್ವ ಎಂಬ ಮಹಿಳೆಯನ್ನು ತನ್ನ ಕಾಮದ ವಸ್ತುವನ್ನಾಗಿ ಬಳಸಿಕೊಳ್ಳುವವನು. ತಾಯವ್ವನ ಗಂಡ ಅವಳನ್ನು ಬಿಟ್ಟಿದ್ದಾನೆಂಬ ಕಾರಣಕ್ಕೆ ಅವಳನ್ನು ತನ್ನ ಸ್ವತ್ತು ಎಂದು ತಿಳಿದುಕೊಂಡಿರುತ್ತಾನೆ. ತನ್ನ ಊರಲ್ಲಿ ಯಾರು ತನಗೆ ಪ್ರತಿಸ್ಪರ್ಧಿಗಳಾಗಬಾರದು, ತಾನೇ ಮೇಲೆ ಬರಬೇಕು ಎಂದು ಸದಾ ಎಚ್ಚರದಲ್ಲಿರುತ್ತಾನೆ. ತಾಯವ್ವನ ಹೋಟೆಲಲ್ಲಿ

ಊರಿನ ಕೇರಿಯ ಜನ ಪ್ರವೇಶ ಪಡೆಯಲು ಹೋರಾಟ ಮಾಡಿದರೆ ಶೀಘ್ರವಾಗಿ ಅವರ ಮೇಲೆ ಕಾರ್ಯಾಚರಣೆ ನಡೆಸುತ್ತಾನೆ. ಅವರ ಮೇಲೆ ದೂರನ್ನು ನೀಡಿ ಪೋಲೀಸರಿಗೆ ಒಪ್ಪಿಸುತ್ತಾನೆ. ಅವರು ಇನ್ನು ಯಾವತ್ತೂ ಆ ತರಹದ ಹೋರಾಟಗಳನ್ನು ಮಾಡಬಾರದು ಎಂದು ಅವರನ್ನು ಮೇಲೆ ಹೇಳದ ಹಾಗೆ ಮಾಡಿರುತ್ತಾನೆ. ಸಮಯ ಬಂದ ಹಾಗೆ ಸಾಮಾನ್ಯ ಜನರನ್ನು ತನ್ನ ಲಾಭಕ್ಕೆ ಬಳಸಿಕೊಳ್ಳುತ್ತಿರುತ್ತಾನೆ. ಉದಾಹರಣೆಗೆ, ಕೇರಿಯ ತೋಪನ್ನು ತಾನು ವಶಪಡಿಸಿಕೊಂಡು ಅದರಿಂದ ಲಾಭ ಪಡೆಯಬೇಕೆಂಬ ಉದ್ದೇಶದಿಂದ ಕೇರಿಯ ಜನರ ಮನ ಒಲಿಸಿಕೊಳ್ಳಲು ಕೇರಿಯ ವಿದ್ಯಾವಂತ ಹುಡುಗರಿಗೆ ಕೆಲವೊಂದು ಆಸೆ ತೋರಿಸುತ್ತಾನೆ. ನಿರೂಪಕನಿಗೆ ತಾಯವ್ವನ ಮಗಳು ಊರ್ವಶಿಯನ್ನು ಇಟ್ಟುಕೋ ಎಂದು ಹೇಳುತ್ತಾನೆ. ಸರ್ಕಾರ ಆ ಊರಿಗೆ ಮಾಡಿದ ಎಲ್ಲಾ ಸೌಕರ್ಯಗಳನ್ನು ತಾನೇ ಮುಂದೆ ನಿಂತು ಅವುಗಳನ್ನು ಮಾಡುತ್ತಾನೆ. ಅಲ್ಲದೆ ಅದರಲ್ಲಿ ಲಾಭ ಪಡೆಯುತ್ತಾನೆ. ಕೇರಿಯ ಜನರಿಗೆ ತನ್ನಿಂದಲೇ ಆ ಎಲ್ಲಾ ಸೌಕರ್ಯಗಳು ತಮ್ಮ ಊರಿಗೆ ಬಂದಿವೆ ಎಂದು ಅವರ ಮುಂದೆ ಜಂಭ ಕೊಚ್ಚಿಕೊಂಡು ಹೇಳುತ್ತಾನೆ. ಕೇರಿಯ ಜನರ ಪ್ರೀತಿಯ ತೋಪನ್ನು ವಶಪಡಿಸಿಕೊಂಡು ತನ್ನ ಮಕ್ಕಳ ಕಾರ್ಖಾನೆಗಳಿಗೆ ಸಾಗಿಸುತ್ತಾನೆ. ಊರಲ್ಲಿ ಹಲವಾರು ಯಂತ್ರೋಪಕರಣಗಳನ್ನು ತಂದು ಅವುಗಳಿಂದ ತನ್ನ ಕಾರ್ಯಗಳನ್ನು ಮುಂದುವರಿಸುತ್ತಾನೆ. ಹೀಗೆ ಸುಬ್ಬೇಗೌಡ ಒಬ್ಬ ಊರಿನ ಹಿರಿಯನಾಗಿ ಊರಲ್ಲಿ ಅನೇಕ ಜನರ ಮೇಲೆ ಶೋಷಣೆ ಮಾಡುತ್ತಾನೆ.

ಭೂಮಿ ಕಥೆಯಲ್ಲಿ ಬರುವ ದಲಿತೇತರ ಪಾತ್ರ ಪಾಳೆಯಗಾರನದು. ಇವನ ದರ್ಪ, ದೊಂಬನ ಅಸಾಮಾನ್ಯ ಹಾರಾಟದ ಪ್ರತಿಭೆ, ಅವನ ಕೀರ್ತಿಗೆ ಅಸೂಯೆ ಪಟ್ಟುಕೊಂಡು ಅವನನ್ನು ಕೊನೆಗಾಣಿಸಲು ಸವಾಲೊಂದನ್ನು ಒಡ್ಡುತ್ತಾನೆ. ದೊಂಬನು ಊರಿನ ಬೆಟ್ಟದ ಕೋಡಗಲ್ಲಿನ ಮೇಲಿಂದ ಹಾರಬೇಕೆನ್ನುವುದೇ ಆ ಸವಾಲು. ಹೀಗೆ ಈ ದಲಿತೇತರ ಪಾತ್ರ ತನ್ನ ವರ್ಗದ ಹಿತಾಸಕ್ತಿಯನ್ನು ಕಾಯ್ದುಕೊಳ್ಳುವ ಬಗೆಯನ್ನು ಅದರೆಲ್ಲಾ ದರ್ಪ, ದೌಲತ್ತುಗಳನ್ನು ವಿಶಿಷ್ಟವಾಗಿ ಚಿತ್ರಿಸುತ್ತಾರೆ.

ಕೊಂಡ ಕಥೆಯಲ್ಲಿ ಬರುವ ಗೌಡ ಪಾತ್ರವು ಕೂಡ ಊಳಿಗಮಾನ್ಯ ವ್ಯವಸ್ಥೆಯ ಹಿತಾಸಕ್ತಿಗಳನ್ನು ಕಾಪಾಡುವ ಹುನ್ನಾರವನ್ನು ಚಿತ್ರಿಸುತ್ತದೆ. ಗೌಡನ ಈ ಹುನ್ನಾರದಿಂದಲೇ ದಲಿತರಿಬ್ಬರೂ ಕೊಂಡದಲ್ಲಿ ಬಿದ್ದು ಪ್ರಾಣಕಳೆದುಕೊಳ್ಳುವ ಚಿತ್ರಣವಿದೆ.

ಆ ಹೆಂಗಸು ಕಥೆಯಲ್ಲಿ ಬರುವ ಪೂಜಾರಿ ಪಾತ್ರವು ಕೆಂಪಿ ಎನ್ನುವ ಮಹಿಳೆಯನ್ನು ಲೈಂಗಿಕವಾಗಿ ಶೋಷಿಸಲು ಪ್ರಯತ್ನಿಸುವ ಚಿತ್ರಣವಿದೆ. ಇವರ ಇನ್ನೊಂದು ಕಥೆಯಾದ ದಿಬ್ಬದ ಕತ್ತಲಲ್ಲಿ ಇಳಿದು ಕಥೆಯಲ್ಲಿ ಬರುವ ಪೂಜಾರಿಯು ವರ್ಗ ಮತ್ತು ವರ್ಣವ್ಯವಸ್ಥೆಯ ರಕ್ಷಕನಾಗಿ ಮೇಲ್ವರ್ಗಕ್ಕೆ ಸಹಾಯಕವಾಗಿ ನಿಲ್ಲುವ ಚಿತ್ರಣವಿದೆ. ಗೌಡ ಮತ್ತು ಪೂಜಾರಿಯವರಿಂದಾಗಿ ಅಮಾಯಕ ದಲಿತ ಕುಟುಂಬವೊಂದು ನಾಶವಾಗುವ ಪರಿಯನ್ನು ಈ ಕಥೆಯಲ್ಲಿ ಚಿತ್ರಿಸಲಾಗಿದೆ. ನಾಗರಾಜ ಎನ್ನುವ ದಲಿತ ಯುವಕನನ್ನು ದಿಬ್ಬದ ಕೆಳಗೆ ಬೀಳುವಂತೆ ಮಾಡಿ ಸಾಯಿಸುವ ಪರಿಯು ಊಳಿಗಮಾನ್ಯ ವ್ಯವಸ್ಥೆಯ ಕ್ರೌರ್ಯದ ಸ್ವರೂಪವನ್ನು ಚಿತ್ರಿಸುತ್ತದೆ.

ಎರಡನೇ ವರ್ಗದಲ್ಲಿ ಬರುವ ಮಣ್ಣು ಕಥೆಯಲ್ಲಿ ಬರುವ ಯಶವಂತ ಪಾತ್ರವು ದಲಿತೇತರ ಪಾತ್ರಕ್ಕೆ ಒಂದು ಉತ್ತಮ ಉದಾಹರಣೆ. ಯಶವಂತ ಆಧುನಿಕ ಯುಗದ ಎಲ್ಲಾ ಆಗುಹೋಗುಗಳನ್ನು ಬಲ್ಲವನಾಗಿರುತ್ತಾನೆ. ಅವನು ಉನ್ನತ ಶಿಕ್ಷಣ ಪಡೆಯಲು ಹಳ್ಳಿಯಿಂದ ಮೈಸೂರು ಪಟ್ಟಣಕ್ಕೆ ಹೋಗಿ ನೆಲೆಸಿರುತ್ತಾನೆ. ಅಂದುಕೊಂಡ ಹಾಗೆ ಸ್ನಾತಕೋತ್ತರ ಪದವಿಯನ್ನು ಪಡೆಯುತ್ತಾನೆ. ಅಲ್ಲಿ ಕ್ರಾಂತಿಕಾರಿ ಪ್ರೊಫೆಸರ್ ಜೊತೆ ಅವರ ವಿಶ್ವಾಸವನ್ನು ಗಳಿಸಿಕೊಳ್ಳುತ್ತಾನೆ. ಅವರ ಪರಿಚಯದ ಮೇಲೆ ಯಮುನ ಎಂಬ ವಿದ್ಯಾವಂತ ಹುಡುಗಿಯ ಜೊತೆ ಸ್ನೇಹ

ಬೆಳೆಸಿಕೊಳ್ಳುತ್ತಾನೆ. ಆ ಸ್ನೇಹ ಹಾಗೆ ಅವರಿಬ್ಬರ ಮಧ್ಯೆ ಪ್ರೀತಿಯಾಗಿ ಬೆಳೆದು ಅವರಿಬ್ಬರು ಲೈಂಗಿಕ ಸಂಬಂಧವನ್ನು ಹೊಂದುತ್ತಾರೆ. ಆ ಮೇಲೆ ಮದುವೆ ಪ್ರಸ್ತಾಪವನ್ನು ಮಾಡುವುದಿಲ್ಲ. ಯಶವಂತ ಅಮೇರಿಕಾಕ್ಕೆ ಹೋದರೆ ಅಲ್ಲಿ ಒಂದು ಉನ್ನತ ಹುದ್ದೆಯನ್ನು ಹಿಡಿಯಬಹುದು ಎಂಬ ಆಶೆಯಿಂದ ಕ್ರಾಂತಿಕಾರ ಪ್ರೊಫೆಸರ್ ಜೊತೆ ಅಮೇರಿಕಾಕಕ್ಕೆ ಹೋಗುತ್ತಾನೆ. ಅವರ ಮಾರ್ಗದರ್ಶನದಲ್ಲಿಯೇ ಸಂಶೋಧನೆ ಕೈಗೊಳ್ಳುತ್ತಾನೆ. ಆದರೆ ಅವನ ಸಂಶೋಧನೆ ಪೂರ್ಣವಾಗುವುದಿಲ್ಲ. ನಂತರ ಮಾರ್ಗದರ್ಶಕರ ಸಹಕಾರದಿಂದ ವಂಚಿತನಾಗುತ್ತಾನೆ. ಮೈಸೂರಿನಲ್ಲಿರುವ ಯಮುನಳ ಹೊಟ್ಟೆಯಲ್ಲಿ ಮಗು ಬೆಳೆಯುವುದನ್ನು ಗಮನಿಸದೆ ಅವಳನ್ನು ಮರೆತುಬಿಡುತ್ತಾನೆ. ನಂತರ ಕ್ರಾಂತಿಕಾರಿ ಪ್ರೊಫೆಸರ್ ಯಾವುದೋ ನಕ್ಸಲೈಟ್ ಗುಂಪಿಗೆ ಸೇರಿದ್ದಾನೆಂದು ತಿಳಿದುಬಂದಾಗ ಅವನ ಜೊತೆ ಯಶವಂತನಿಗೆ ಸಂಬಂಧವಿದೆಯೆಂದು ಅವನನ್ನು ಜೈಲಿಗೆ ಹಾಕುತ್ತಾರೆ. ಕೊನೆಗೆ ಅಲ್ಲಿಂದ ಹೇಗೋ ತಪ್ಪಿಸಿಕೊಂಡು ಮನೆಗೆ ಬರುತ್ತಾನೆ. ಅವನ ಕುಟುಂಬ ಹಲವಾರು ಹೊಡೆತಗಳಿಗೆ ಬಲಿಯಾಗಿ ಬೀದಿಗೆ ಬಂದಿರುತ್ತದೆ. ಹೀಗೆ ಯಶವಂತ ತನ್ನ ಜೀವನದಲ್ಲಿ ಹಲವಾರು ಸಂಘರ್ಷಗಳಿಗೆ ಒಳಗಾದವನು.

ಮೂರನೆ ವರ್ಗಕ್ಕೆ ಮೃಗಜಲ ಮತ್ತು ಗಂಟೆ ಜೋಗಿ ಕಥೆಗಳನ್ನು ಹೆಸರಿಸಬಹುದು. ಮೃಗಜಲ ಕಥೆಯಲ್ಲಿ ನೃಪತುಂಗ ಒಬ್ಬ ದಲಿತೇತರ ಪಾತ್ರವಾಗಿ ಕಂಡುಬರುತ್ತಾನೆ. ಅವನು ಯಾವುದೋ ಒಂದು ಆಫೀಸಿನಲ್ಲಿ ಗುಮಾಸ್ತನಾಗಿ ಕಾರ್ಯನಿರ್ವಹಿಸುತ್ತಾನೆ. ಅಲ್ಲಿ ಇವನನ್ನು ಎಲ್ಲರೂ ಹಾಸ್ಯವ್ಯಕ್ತಿಯನ್ನಾಗಿ ಕಾಣುತ್ತಾರೆ. ಆಫೀಸಿನ ಬಾಸ್ ಕೂಡ ಇವನನ್ನು ಹಾಸ್ಯಕ್ಕೆ ಒಳಪಡಿಸುತ್ತಾನೆ. ನೃಪತುಂಗ ಆಫೀಸಿನಲ್ಲಿ ಒಬ್ಬ ಕವಿಯಾಗಿ ಎಲ್ಲ ನಗೆಚಾಟಲೆಗೆ ವಸ್ತುವಾಗಿ ಸಿಗುತ್ತಾನೆ. ನೃಪತುಂಗ ತನಗೆ ಅನಿಸಿದ ಹಾಗೆ ತನ್ನ ಜೀವನ ಸಾಗಿಸುತ್ತಿರುತ್ತಾನೆ. ತನಗೆ ಬೇಕಾದ ಸಮಯದಲ್ಲಿ ಆಫೀಸಿಗೆ ಹೋಗುವುದು, ಬೇಡವಾದಾಗ ಬಿಡುವುದು ಮಾಡುತ್ತಾನೆ. ಒಮ್ಮೆ ಐದು ದಿನಗಳ ಕಾಲ ಆಫೀಸಿಗೆ ಹೋಗದೆ ಯಾವುದೋ ಒಂದು ಮಹಿಳೆಯ ಒಣಗಲು ಹಾಕಿದ ಬಟ್ಟೆಗಳನ್ನು ನೋಡುತ್ತಾ ಕುಳಿತಿರುತ್ತಾನೆ. ಆ ಬಟ್ಟೆಗಳನ್ನು ತೊಡುವ ಮಹಿಳೆಯ ಆಕರ್ಷಣೆಗೆ ಒಳಗಾಗುತ್ತಾನೆ. ಆದರೆ ಆ ಮಹಿಳೆ ಅವನ ಕಣ್ಣಿಗೆ ಕಾಣುವುದಿಲ್ಲ. ಕೊನೆಗೆ ಅವಳನ್ನು ಕಾಯ್ದು ಕಾಯ್ದು ಬೇಸತ್ತು ಆಫೀಸನ್ನು ನೆನಸಿಕೊಂಡು ಹೋಗುತ್ತಾನೆ. ಆದರೆ ಆಫೀಸಿನಲ್ಲಿ ಕೆಲವು ಬದಲಾವಣೆಗಳಾಗಿರುತ್ತವೆ. ಅಲ್ಲಿಯ ಬಾಸ್ ವರ್ಗಾವಣೆಯಾಗಿರುತ್ತಾನೆ. ಅದರಿಂದ ತನ್ನ ಉದ್ಯೋಗವನ್ನು ಕಳೆದುಕೊಂಡು ನಿರುದ್ಯೋಗಿಯಾಗಿ ಅಲೆಯುತ್ತಾ ಹೋಗುತ್ತಾನೆ.

ಗಂಟೆ ಜೋಗಿ ಎಂಬ ಕಥೆಯಲ್ಲಿ ಗಂಟೆ ಜೋಗಿ ಅಲೆಮಾರಿ ವ್ಯಕ್ತಿಯಾಗಿ ಕಂಡುಬರುತ್ತಾನೆ. ಅವನು ಊರಿನ ಹಲವಾರು ಶ್ರೀಮಂತರ ಮನೆಯಲ್ಲಿ ಚಾರು ಚೂರು ಕೆಲಸ ಮಾಡಿ ಅವರ ಮನೆಯಲ್ಲಿ ಊಟ ಮಾಡಿ ಕಾಲ ಕಳೆಯುತ್ತಾನೆ. ಆದರೆ ಅವನ ಖರ್ಚಿಗೆ ದುಡ್ಡು ಇರುವುದಿಲ್ಲ. ಅದಕ್ಕಾಗಿ ಊರಿನ ಸಾಹುಕಾರನ ಮನೆಯಲ್ಲಿರುವ ಗಂಟೆ ಗಡಿಯಾರವನ್ನು ಕದ್ದು ಮಾರಲು ಪೇಟೆಗೆ ಹೋಗುತ್ತಾನೆ. ಹೋಗುವಾಗ ಆ ಗಂಟೆಯ ಗಡಿಯಾರದ ಒಡೆಯ ಸಾಹುಕಾರ ಬಸ್ಸಿನಲ್ಲಿ ಬರುತ್ತನೆ. ಬಸ್ಸಿನಲ್ಲಿ ಅವನು ಕದ್ದು ತಂದ ಗಡಿಯಾಗರ ಗಂಟೆ ಬಾರಿಸುತ್ತದೆ. ತಾನು ಕದ್ದು ತಂದ ಗಂಟೆ ಗಡಿಯಾರ ಗಂಟೆ ಬಾರಿಸುವುದನ್ನು ಕೇಳಿಸಿಕೊಂಡು ಬಸ್ಸಿನಲ್ಲಿ ಪ್ರಯಾಣಿಸುವ ಜನ ನಗುತ್ತಾರೆ. ಇದು ಆ ಸಾಹುಕಾರನೂ ಕೇಳಿಸಿಕೊಂಡಿರುತ್ತಾನೆ. ಆದರೆ ಸಾಹುಕಾರನಿಗೆ ತನ್ನದೇ ಗಡಿಯಾರವೆಂದು ತಿಳಿದಿರುವುದಿಲ್ಲ. ಗಂಟೆ ಜೋಗಿ ಸಾಹುಕಾರನಿಗೆ ತನ್ನ ಕಳ್ಳತನದ ವಿಷಯ ತಿಳಿಯಿತು ಎಂದು ಎಲ್ಲ ವಿಷಯವನ್ನೂ ಹೇಳಿಬಿಡುತ್ತಾನೆ. ಈ ಗಂಟೆ ಜೋಗಿಯ ಮುಗ್ಧತೆಯನ್ನು ಲೇಖಕರು ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿಸುತ್ತಾರೆ

ಅಧ್ಯಾಯ ಐದು

# ಮೊಗಳ್ಳಿ ಕಥನ ಮತ್ತು ಜನಪದ ಲೋಕದ ಸಾವಯುವ ಸಂಬಂಧ

## ೫.೧. ರಮ್ಯಾಧ್ಭುತ ಸ್ವಭಾವ

ಮೊಗಳ್ಳಿ ಅವರನ್ನು ಅವರ ವಾರಿಗೆಯ ಲೇಖಕರಿಂದ ಭಿನ್ನವಾಗಿಸುವ ಅವರ ಕಥನದ ವಿಶಿಷ್ಟ ಗುಣವನ್ನಾಗಿ ಈ ರಮ್ಯಾದ್ಭುತ ಸ್ವಭಾವವನ್ನು ಇದನ್ನು ಹೇಳಬಹುದಾಗಿದೆ. ಜನಪದದ ಅಧ್ಭುತ ರಮ್ಯ ಕಥನದ ಸ್ವಭಾವವು ಮೊಗಳ್ಳಿಯವರ ಬರವಣಿಗೆಯ ಅಂತರ್ಗತವಾದ ಒಂದು ಸ್ವಭಾವವೆನ್ನಬಹುದು. ಇಂತಹ ಈ ಸ್ವಭಾವವು ಅವರ ಬರವಣಿಗೆಯ ಭಾಷೆಯನ್ನು ಸತ್ವಯುತವನ್ನಾಗಿಸಿ ಚಿತ್ರಕ ಶಕ್ತಿಯನ್ನು ಸಮೃದ್ಧಗೊಳಿಸಿದೆಯೆನ್ನಬಹುದು. ಬಾಲ್ಯದಿಂದಲೂ ಕಥನಜಗತ್ತಿನಲ್ಲಿ ಉಸಿರಾಡುತ್ತಿದ್ದ ಮೊಗಳ್ಳಿಯವರು ತಮ್ಮ ಬಾಲ್ಯದ ಕಠೋರತೆಯನ್ನು, ತಬ್ಬಲಿತನವನ್ನು ಇಂತಹ ಕಥಾಜಗತ್ತಿನ ಮಾಯಾ ಲೋಕದಲ್ಲಿ ನೀಗಿಸಿಕೊಳ್ಳುತ್ತಿದ್ದರೆಂದು ಅವರ ಅನುಭವದಿಂದಲೇ ತಿಳಿದುಬರುತ್ತದೆ. ಇದಕ್ಕೆ ಪೂರಕವಾಗಿ ಇವರ ಸೃಜನಶೀಲ ವ್ಯಕ್ತಿತ್ವದ ವಿಕಾಸಕ್ಕೆ ಇಂಥ ರಮ್ಯ ಕಿನ್ನರ ಕಥನಲೋಕದೊಂದಿಗೆ ಅವರು ಬಾಲಕರಾಗಿದ್ದಾಗ ಏಕಾಂಗಿಯಾಗಿ ಕಾಲ ಕಳೆಯುತ್ತಿದ್ದ ಊರ ಹೊರಗಿನ ತೊರೆ, ತೊರೆನ್ನಾವರಿಸಿದ್ದ ಮರದ ಗುಂಪು, ಆ ಗುಂಪಿನ ಮರವೊಂದರಲ್ಲಿ ಹತ್ತಿ ಕುಳಿತು ಮೌನವಾಗಿ ತೊರೆಯನ್ನು ವೀಕ್ಷಿಸುತ್ತಾ ಭಾವಲೋಕವೊಂದನ್ನು ಅನಾವರಣಗೊಳಿಸಿಕೊಳ್ಳುತ್ತಿದ್ದ ಮೊಗಳ್ಳಿಯವರ ಭಾಷಿಕ ಅಭಿವ್ಯಕ್ತಿಗೆ ಇಂತಹದೊಂದು ಗುಣ ಸಹಜವಾಗಿಯೇ ಬೆರೆಯಿತು.

## ೫.೨ ಮಾಂತ್ರಿಕ ನಿರೂಪಣೆ

ಮಾಂತ್ರಿಕ ನಿರೂಪಣೆ ಕೂಡ ಇವರ ಸೃಷ್ಟಿಶೀಲತೆಗೂ ಮತ್ತು ಜನಪದ ಲೋಕಕ್ಕೂ ಇರುವ ಸಾವಯುವ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ. "ನಮ್ಮ ಕಣ್ಣೆದುರಿಗಿನ ವಾಸ್ತವವನ್ನು ಬಿಂಬಿಸುವ ರೀತಿಯಲ್ಲಿ ಆರಂಭವಾಗುವ ಕಾದಂಬರಿ, ಎರಡನೆ ಪ್ಯಾರದಿಂದಲೆ ಮ್ಯಾಜಿಕಲ್ ರಿಯಲಿಜಂಗೆ ಧುಮುಕಿ ನಂತರ ಅದರೆಲ್ಲಾ ಸಾಧ್ಯತೆಗಳನ್ನುಅನ್ವೇಷಿಸುತ್ತಾ ಸಾಗಿ....ಮತ್ತೆ ಮೈಮೂಲಿಗೆ ಬಂತೇನೊ ಎಂದುಕೊಳ್ಳುವಷ್ಟರಲ್ಲಿ ಫ್ಯಾಂಟಸಿಯ ಲೋಕಕ್ಕೆ ನಮ್ಮನ್ನು ಸೆಳೆದೊಯ್ಯುತ್ತದೆ." ಎಂದು ಅಗ್ನಿ ಶ್ರೀಧರ್ ಮೊಗಳ್ಳಿಯವರ ತೊಟಿಲು ಕಾದಂಬರಿಯ ಕಥನವನ್ನು ವಿಶ್ಲೇಷಿಸುತ್ತಾರೆ.

"ಕಟುವಾಸ್ತವದಲ್ಲೂ ಅಡಗಿರುವ ಮಾಂತ್ರಿಕತೆಯ ಮೋಡಿಯನ್ನು ನಮ್ಮ ಗಮನಕ್ಕೆ ತಂದವರು ಲ್ಯಾಟಿನ್ ಅಮೆರಿಕನ್ ಬರಹಗಾರರು ಎರವಲು ಬಂದ ಯಂತ್ರ ಸಂಸ್ಕೃತಿಯ ವಿರುದ್ಧ ದೇಸಿ ಸಂಸ್ಕೃತಿಯ ಪ್ರಾಬಲ್ಯವನ್ನು ಮತ್ತು ಶ್ರೇಷ್ಠತೆಯನ್ನು ಪ್ರತಿಪಾದಿಸಲು ಆ ಬರಹಗಾರರು ಬಳಸಿಕೊಂಡ ಶೈಲಿ" ಎಂದು ವಿವರಿಸಲಾಗುತ್ತದೆ.

## ೫.೩ ಕನಸಿನ ವಾಸ್ತವ

ವಾಸ್ತವವಾದಿ ಬರವಣಿಗೆಯ ಕ್ರಮದಲ್ಲಿ ವಾಸ್ತವದ ಕಠೋರತೆಯನ್ನು ಮೀರಲು ಕಟ್ಟಿಕೊಂಡ ಪ್ರಕ್ರಿಯೆಯೊಂದನ್ನು ಕನಸಿನ ವಾಸ್ತವ ಎಂಬುದಾಗಿ ವಿವರಿಸಬಹುದಾಗಿದೆ. ಇದು ಕಥನದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮೂಡಿಬರುತ್ತದೆ. ಮನುಷ್ಯನಿಗೆ ವಾಸ್ತವದಲ್ಲಿ ಸಾಧ್ಯವಾಗದ ಆಶಯಗಳು ಕನಸಲ್ಲಿ ಕೈಗೂಡುತ್ತವೆ.

ಇದಕ್ಕೆ ನಿದರ್ಶನವಾಗಿ ಮೊಗಳ್ಳಿಯವರ 'ಭೂಮಿ', 'ಜೀವ' ಮತ್ತು 'ಪ್ರಾಯ್ಡ್‌ನು ಹೇಳಿದ ಕೊನೆಯ ಕಥೆ' ಎನ್ನುವ ಮೂರು ಕಥೆಗಳನ್ನು ಉದಹರಿಸಬಹುದು. ಇಲ್ಲಿ ಭೂಮಿ ಕಥೆಯನ್ನು ವಿಶ್ಲೇಷಣೆಗೆ ಆರಿಸಿಕೊಳ್ಳಲಾಗಿದೆ.

> "ಮತ್ತದೇ ಆಕಾಶ ತನ್ನೆಲ್ಲ ನಕ್ಷತ್ರಗಳ ಸಾಕ್ಷಿಯಲ್ಲಿ ರಾತ್ರಿಯ ಕತ್ತಲನ್ನು ಜಗಿಯುತ್ತಿತ್ತು. ಎಂದಿನಂತೆಯೇ ನೀರವತೆಯು ಆಕಳಿಕೆಯಲ್ಲಿ ಕೇರಿ ತೂಕಡಿಸುತ್ತಿತ್ತು. ಯಾವತ್ತೂ ಮುಗಿಯದ ಅತಂತ್ರಗಳ ಅಲೆಗಳ ಮೇಲೆ ಕಲ್ಪನೆಯ ದೋಣಿ ಕಟ್ಟಿ, ಅದರಲ್ಲಿ ಕುಳಿತು ನಾವೆಲ್ಲ ತೇಳಿ ತೇಲಿ ದೂರ ದೂರಕ್ಕೆ ಹಾರಿಹೋಗುತ್ತಿದ್ದೆವು. ಅದೇ ಹಳೆಯ ಕಾಲದ ನಮ್ಮ ಪೂರ್ವಿಕರ ಕತೆಯನ್ನು ನಮ್ಮ ತಾತ ದಣಿದ ತನ್ನ ಕಾಲಾಂತರದ ಸ್ವರದಲ್ಲಿ ನಿಧಾನಕ್ಕೆ ಹೇಳುತ್ತಿದ್ದ. ಭೂಮಿತಾಯಿ ನಮ್ಮನ್ನೆಲ್ಲ ತನ್ನ ಹೊಟ್ಟೆಯ ಮೇಲೆ ಮಲಗಿಸಿಕೊಂಡು, ಗಾಳಿ ಬೀಸಿದ ಜೋಗುಳ ಹಾಡಿಸಿದಂತೆ ಏನನ್ನೋ ಆಲೋಚಿಸುತ್ತಿದ್ದಳು. ನಾವೆಲ್ಲ ಹಿಂಡು ಬಳಗದ ಹೈಕಳು ನಮ್ಮ ಪೂರ್ವಿಕರ ಕನಸ್ಸನ್ನು ಮನಸ್ಸಿಗೆ ಬಿತ್ತಿಕೊಂಡು ಆಲಿಸತೊಡಗಿದೆವು"

ಕಥೆಯ ಆರಂಭವೇ ಇಂತಹದೊಂದು ಕನಸನ್ನು ಮನಸ್ಸಿಗೆ ಬಿತ್ತಿಕೊಂಡು ಆಲಿಸತೊಡಗಿರುವ ಕ್ರಿಯೆಯನ್ನು ಹೇಳುತ್ತದೆ. ಶತ ಶತಮಾನಗಳಿಂದಲೂ ದಮನಕ್ಕೆ ಒಳಗಾದ ದಲಿತ ಜಗತ್ತು ತನ್ನೆಲ್ಲಾ ನೋವು ನಲಿವುಗಳನ್ನು ಇಂತಹ ಕನಸಿನ ವಾಸ್ತವದ ಮೂಲಕವೇ ನಿರಾಳವಾಗುತ್ತದೆನ್ನುವ ಅಂಶ ಇಲ್ಲಿ ಸ್ಪಷ್ಟವಾಗುತ್ತದೆ. ಇಂತಹ ಈ ಕನಸಿನ ಜಗತ್ತು ತಾಯ್ತನದ ಅಕ್ಕರೆಯೆದೆಂದೂ ಹೇಳಬಹುದಾಗಿದೆ.

ದೊಂಬನೊಬ್ಬನ ಪಾತ್ರಚಿತ್ರಣದ ಮೂಲಕ ಸಾಗುವ ಈ ಕಥೆಯು ಇಂಥಹ ಕನಸಿನ ವಾಸ್ತವದ ಮೂಲಕ ಭಾಷಿಕವಾಗಿ ಕಟ್ಟಿಕೊಡುವ ಜಗತ್ತು ಅಪೂರ್ವವಾದುದಾಗಿದೆ.

> "ಆಗ ಒಂದು ಕಾಲದಲ್ಲಿ ಅವನೊಬ್ಬನಿದ್ದ. ಊರೂರು ಅಲೆವ ಅಲೆಮಾರಿ ದೊಂಬನಾಗಿದ್ದ. ತನ್ನ ಪುಟ್ಟ ಸಂಸಾರ ಕಟ್ಟಿಕೊಂಡು ಸುತ್ತೇಳು ಹಳ್ಳಿಗಳಲ್ಲೂ ದೊಂಬರಾಟ ಆಡಿ, ಕುಣಿಸಿ, ನಲಿಸಿ, ಸವಾಲು ಎಸೆದು, ಅವುಗಳ ಬಿಡಿಸಿ ತಂತ್ರ-ಮಂತ್ರ ವಿದ್ಯೆಗಳಿಂದ ಎಲ್ಲರಿಗೂ ಬೆರಗು ಹುಟ್ಟಿಸಿ ಮೋಡಿ ಮಾಡಿಬಿಟ್ಟಿದ್ದ. ಅವನಂಥ ಒಬ್ಬ ದೊಂಬ ಎಲ್ಲೂ ಇರಲು ಸಾಧ್ಯವಿಲ್ಲ ಎಂದು ಜನ ಮಾತನಾಡಿಕೊಳ್ಳುತ್ತಿದ್ದರು. ನಿಜಕ್ಕೂ ಅವನೊಬ್ಬ ಸಾಹಸೀ ಹುಚ್ಚು ದೊಂಬ. ಆ ಹುಚ್ಚಿನ ಸಾಹಸಗಳಲ್ಲಿ ಅವನ ಕುಲಪಿತರೆಲ್ಲ ಐಕ್ಯವಾದಂತಿತ್ತು. ಅವನ ಪೂರ್ವಿಕರೋ; ಅವನಂತೆಯೇ ಏನೊಂದೂ ಸಾಧಿಸದೆ ಅಲೆವ ಮೋಡಗಳಂತೆ

ಲೋಕದ ಗದ್ದಲವ ಮಿಂಚು, ಗುಡುಗುಗಳ ಆರ್ಭಟಕ್ಕೆ ಸಿಲುಕಿ ನೀರಾಗಿ ಹರಿದು ಹೋಗಿದ್ದರು. ಎಲ್ಲ ಆಸೆಗಳೂ ಇಲ್ಲೇ ಈ ನೆಲದಲ್ಲೇ ಫಲಿತವಾಗಬೇಕೆಂಬಂತೆ ಅವರವರೆಲ್ಲ ಎಲ್ಲ ಆಕಾಂಕ್ಷೆಗಳನ್ನೂ ಈ ದೊಂಬನ ಹೆಗಲಿಗೆ ಕಟ್ಟಿ ಬದುಕಿನ ಬುತ್ತಿಯೊಳಗೆ ಜೀವ ತುಂಬಿ ಭೂಮಿಗೆ ಬಿಟ್ಟುಹೋಗಿದ್ದರು. ಹೀಗಾಗಿಯೇ ಆ ದೊಂಬನಿಗೆ ಎಂಥದೋ ವಿಚಿತ್ರ ಹಾರಾಟದ ಕನಸು ಯಾವಾಗಲೂ ಕಾಡುತ್ತಿತ್ತು. ..."

ಇಂತಹ ವಿಚಿತ್ರ ಹಾರಾಟದ ಕನಸ ಹೊತ್ತ ದೊಂಬ ಒಂದು ದಿನ ಆಕಾಶವನ್ನು ದಿಟ್ಟಿಸಿ ಕತ್ತಲನ್ನು ಸೀಳುವಂತೆ ನಕ್ಷತ್ರಗಳ ಕಣ್ಣಿಗೆ ತುಂಬಿಕೊಳ್ಳುತ್ತಿರುವಾಗ ಯಾರೋ ಬಂದಂತಾಯಿತು. ಕಪ್ಪು ಛಾಯೆಗಳು ಅವನ ಸುತ್ತವೇ ಮುತ್ತಿಕೊಂಡಂತಾಯಿತು. ಆ ನೆರಳುಗಳು ಒಂದೊಂದಾಗಿ ಅವನ ದೇಹ ತುಂಬಿಕೊಂಡವು. ಮರ್ಮಗಳ ಗಾಳಿಯಲ್ಲಿ ನೆರಳುಗಳು ಮಾತು ಬಿಚ್ಚಿದವು. ನೋಡು, ನಮ್ಮ ಮಾತನ್ನೆಲ್ಲಾ ಎಚ್ಚರಿಕೆಯಿಂದ ನಾಭಿಯಾಳಕ್ಕೆ ಸೆಳೆದುಕೊ. ಈ ಲೋಕ ಬಹಳ ಸೂಕ್ಷ್ಮವಾದದ್ದು. ಅದನ್ನು ಗೆಲ್ಲಬೇಕೆಂದರೆ ನಮ್ಮೆಲ್ಲರ ಯುಕ್ತಿಯನ್ನೂ ಕನಸನ್ನೂ ಅರಗಿಸಿಕೊಂಡೇ ಜಿಗಿಯಬೇಕು. ಮೆಲೆ ಮೇಲೇರಿ ಜಿಗಿಯಬೇಕು. ಮೇಲೆ ಮೇಲೇರಿ ಈ ಮಣ್ಣನ್ನು ನೋಡಬೇಕೆಂದರೆ ನಮ್ಮ ಬವಣೆಯ ಬುತ್ತಿಯನ್ನೂ ಮೇಲೆತ್ತಿಕೊಂಡೇ ಹಾರಬೇಕು ಎಂದು ಪಿಸುದನಿಗೂ ಮೀರಿ ಉಲಿದವು. ಆ ನಂತರದಲ್ಲಿ ಹಾರಾಟದ ಶಕ್ತಿ ಪಡೆದುಕೊಂಡ ದೊಂಬ ಊರೂರು ದಿಬ್ಬಗಳ ಮೇಲೆ ಹತ್ತಿ ಎತ್ತರದ ಮರವೇರಿ, ಮೇಲಿಂದ ಕೆಳಕ್ಕೆ ಧುಮುಕಿ ಹಾಯಾಗಿ ಹಕ್ಕಿಯಂತೆ ಹಾರಾಡತೊಡಗಿದ. ಹೀಗೆ ಹಾರಾಡತೊಡಗಿದ ದೊಂಬನಿಗೆ ಜನ ಹಾರುವ ಮಾಯಾವಿ ದೊಂಬ ಎಂದು ಜನ ಅವನಿಗೆ ಬಿರುದು ಕೊಟ್ಟರು. ಇಂತಹ ಈ ದೊಂಬ ತನ್ನ ಹಾರಾಟದ ಮೋಡಿ ಆಟವನ್ನು ಎಲ್ಲೆಡೆಗೂ ಪ್ರದರ್ಶಿಸುತ್ತಾ ಕಟ್ಟ ಕಡೆಗೆ ಒಂದು ಹಳ್ಳಿಯಲ್ಲಿ ಮಾತ್ರ ಪ್ರದರ್ಶಿಸುವುದಿತ್ತು. ಅಷ್ಟೊತ್ತಿಗಾಗಲೆ ಇವನು ಒಂದು ದಂತ ಕಥೆಯಾಗಿ ಹೋಗಿದ್ದ. ಜನರೆಲ್ಲರ ಯಾವುದೋ ತೀರದ ಆಸೆಯನ್ನು ಈಡೇರಿಸಬಲ್ಲಂತಹ ಆಶಯವಾಗಿ ರೂಪುಗೊಂಡು ಬಿಟ್ಟಿದ್ದ.

ಇಂಥ ದೊಂಬ ಪ್ರದರ್ಶಿಸುವ ಕಟ್ಟ ಕಡೆಯ ಆಟವನ್ನು ವೀಕ್ಷಿಸಲು ಸುತ್ತಮುತ್ತಲಿನ ಹಳ್ಳಿಯ ಜನರೆಲ್ಲಾ ಆ ಜಾಗದಲ್ಲಿ ನೆರೆದರು. ಹೀಗೆ ನೆರೆದ ಜನರಿಗೆ ತಮ್ಮೆಲ್ಲಾ ಕನಸುಗಳನ್ನು ಈಡೇರಿಸಲು ಈ ದೊಂಬನಿಂದ ಮಾತ್ರ ಸಾಧ್ಯವೆಂಬ ಅಪಾರ ನಂಬಿಕೆ ಬಂದು ಬಿಟ್ಟಿತ್ತು. ಆದರೆ ಅಲ್ಲಿನ ಪಾಳೆಯಗಾರ ಮಾತ್ರ ನನ್ನನ್ನು ಒಂದೂ ಮಾತು ಕೇಳದೆ ತನ್ನ ಆಟವನ್ನು ಪ್ರದರ್ಶಿಸುವ ಈ ದೊಂಬನನ್ನು ಒಂದು ಕೈ ನೋಡಬೇಕೆಂಬ ಆಕ್ರೋಶ ಹುಟ್ಟಿತು. ದೊಂಬನಿಗೆ ಹೇಳಿ ಕಳಿಸಿದರೆ ಅವನು ಬರಲಿಲ್ಲ. ಕಡೆಗೆ ಆ ಪಾಳೆಯಗಾರನು ದೊಂಬನಿದ್ದಲ್ಲಿಗೇ ಹೊರಡುತ್ತಾನೆ. ತನ್ನ ಅಧೀನದಲ್ಲಿದ ಜನರೆಲ್ಲಾ ಆ ದೊಂಬನ ಮೋಡಿಗೊಳಗಾಗಿದ್ದನ್ನು ಗಮನಿಸಿದ ಆ ಪಾಳೆಯಗಾರ ಅಲ್ಲಿ ಹೂಂಕರಿಸಿ ಕತ್ತಿ ಝಳಪಿಸಿ ಘರ್ಜಿಸುತ್ತಾನೆ. ದೊಂಬನನ್ನು ಮಾತನಾಡಿಸುತ್ತಾನೆ. ದೊಂಬ ಅವನನ್ನು ಲೆಕ್ಕಿಸುವುದೇ ಇಲ್ಲ. ಕಡೆಗೆ ಪಾಳೆಯಗಾರ ದೊಂಬನಿಗೆ ಸವಾಲೊಂದು ಎಸೆಯುತ್ತಾನೆ. ಆ ಊರಿನ ಆಚೆ ಇರುವ ಬೆಟ್ಟದ ಕೋಡುಗಲ್ಲಿನಿಂದ ಜಿಗಿದು ಹಾರಬೇಕೆಂಬುದೇ ಆ ಸವಾಲು. ಆ ಸವಾಲಿಗೆ ಪ್ರತಿಯಾಗಿ ದೊಂಬನೂ ಒಪ್ಪಂದವೊಂದನ್ನು ವಿಧಿಸುತ್ತಾನೆ. ತಾನು ಎಷ್ಟು ದೂರ ಹಾರಬಲ್ಲೆನೋ ಅಷ್ಟು ದೂರದ ವರೆಗಿನ ಭೂಮಿಗೆಲ್ಲಾ ತಾನು ಮತ್ತು ತನ್ನ ಜನರೆಲ್ಲಾ ಒಡೆಯರಾಗುತ್ತೇವೆಂದು. ಅದರಂತೆಯೇ ದೊಂಬ ಕೋಡಗಲ್ಲ ಶಿಖರವನ್ನೇರಿ ಹಾರುತ್ತಾನೆ. ಪಾಳೆಯಗಾರ ಆ ದೊಂಬ ಸಾಯುತ್ತಾನೆಂದು ನಿರೀಕ್ಷಿಸಿರುತ್ತಾನೆ. ಆದರೆ ಅವನು

ಸಾಯುವುದಿಲ್ಲ. ಹಾರಿಯೂ ಬದುಕಿರುತ್ತಾನೆ. ಒಪ್ಪಂದಂತೆ ಅವನು ಭೂಮಿಯನ್ನು ಬಿಟ್ಟುಕೊಡಲು ಒಪ್ಪುವುದಿಲ್ಲ. ಆಗ ದೊಂಬ,

> ದೊಂಬನ ಹೆಂಡತಿಗೆ ಹುಚ್ಚೇ ಹಿಡಿದಂತೆ ಆಗುತ್ತಿತ್ತು. ಆ ಬಡ ದೊಂಬನಿಗೆ ಪಾಳೆಯಗಾರನ ಮಾತು ಸಲಾಕೆಯಂತೆ ತಿವಿದವು. ಎಲ್ಲ ಶಕ್ತಿಯನ್ನೂ ತುಂಬಿಕೊಂಡು ಎದ್ದು ಬಂದ ದೊಂಬ ಭೂಮ್ಯಾಕಾಶಕ್ಕೂ ಒಮ್ಮೆ ಅಗಾಧವಾಗಿ ನೋಡಿ ಪಾಳೆಯಗಾರನನ್ನು ಮಾರ್ಮಿಕವಾಗಿ ದಿಟ್ಟಿಸಿ ಮಾತಿಗೆ ತಪ್ಪುತ್ತಿರುವೆಯಲ್ಲಾ, ಈಗ ನೋಡು ಏನು ಮಾಡುತ್ತೇನೆಂದು ತನ್ನ ದೇಹವನ್ನೆಲ್ಲ ಮುರಿದು ನರನರಗಳನ್ನೇ ಉರಿ ಮಾಡಿದಂತೆ ಬಿಗಿದು ತನ್ನೆರಡೂ ಕೈಕಾಲುಗಳನ್ನು ನಿಡಿದಾಗ ಬೀಸಿ ದೊಪ್ಪನೆ ನೆಲಕ್ಕೆ ಬಿದ್ದುಕೊಂಡ. ನೋಡುನೋಡುತ್ತಿರುವಂತೆಯೇ ಅವನಕೈಕಾಲುಗಳು ಸಾವಿರಾರು ಕವಲುಗಳಾದಂತೆ ವಿಸ್ತರಿಸಿಕೊಂಡು ಬೆಳೆದು ಭೂಮಿಯ ಆಳ ಆಳಕ್ಕೆ ಇಳಿದು ಅವನ ದೇಹವೆಲ್ಲ ಮೆಲ್ಲಮೆಲ್ಲಗೆ ಬಿರಿಯುತ್ತಾ ಅರಳುತ್ತಾ ಅಗಾಧವಾಗಿ ಅಲ್ಲೆಲ್ಲ ವ್ಯಾಪಿಸಿಕೊಳ್ಳತೊಡಗಿತು.
>
> ಜನ ಆಶ್ಚರ್ಯದಿಂದ ನೋಡತೊಡಗಿದರು. ದೊಂಬನ ದೇಹ ಮಣ್ಣೊಳಕ್ಕೆ ಬಲಿ ಚಕ್ರವರ್ತಿಯ ನೆನಪಿನಂತೆ ಇಳಿಯುತ್ತಲೇ ವಿಸ್ತರಿಸಿಕೊಳ್ಳುತ್ತಿತ್ತು. ಅವನ ಶರೀರವೆಲ್ಲ ಲಟಲಟಿಸಿ ಮುರಿದುಕೊಂಡಂತೆ ಭೂಮಿ ಕಂಪಿಸಿ, ಅದರೊಳಗೆ ಯಾರು ಯಾರೋ ಮಲಗಿದ್ದವರೆಲ್ಲ ಎಚ್ಚರಗೊಂಡು ಹಾಡಿದಂತಾಗಿ ಅದು ಗುಡುಗಾಗಿ ಮೊಳಗಿ ಭೂಮಿಯೇ ನಡುಗಿದಂತೆ ಕೇಳಿಸಿ ಪಾಳೆಯಗಾರ ದಿಕ್ಕೆಟ್ಟಂತಾದ. ನೆರೆದಿದ್ದವರನ್ನು ಉದ್ದೇಶಿಸಿ, ಇವನು ನಿಜವಾಗಿಯೂ ನಮ್ಮ ಸೀಮೆಗೆ ಒದಗಿಬಂದ ಕೇಡು. ಇವನನ್ನು ಕಿತ್ತು ಅತ್ತ ಹೊಸಕಿ ಹಾಕಿ, ಮಣ್ಣಾಳಕ್ಕೆ ಇವನು ಇಳಿಯದಂತೆ ತಡೆಯಿರಿ ಎಂದು ಆದೇಶಿಸಿದ. ಅನೇಕರು ಅವನನ್ನು ನೆಲದ ಬೇರಿನಿಂದ ಕಿತ್ತುಹಾಕಲು ನುಗ್ಗಿದರು. ಅವರು ಇವರು ಎಲ್ಲ ಎಲ್ಲ ಜನವೆಲ್ಲ ಬಂದರು. ಒಬ್ಬೊಬ್ಬರು ಗುಂಪುಗುಂಪಾಗಿ ಅವನನ್ನು ನೆಲದಿಂದ ಕಿತ್ತು ಬೇರ್ಪಡಿಸಲು ಸಾಹಸಪಟ್ಟರು. ದೊಂಬನ ಬೆರಳುಗಳು ಅಸಂಖ್ಯಾತ ಬೇರುಗಳಾಗಿ ಟಿಸಿಲೊಡೆದು ಅವನ ರೋಮ ರೋಮವೂ ಒಂದೊಂದು ಕವಲುಗಳಾಗಿ ಭೂಮಿ ತಾಯಿಯಲ್ಲಿ ಕಿತ್ತುಹಾಕಲು ಪ್ರಯತ್ನಿಸಿದಂತೆಲ್ಲ ಅವನ ದೇಹ ಮಣ್ಣೊಳಕ್ಕೆ ಲೀನವಾಗುತ್ತಾ ಬಲಿಯುತ್ತಿತ್ತು.
>
> ಈ ಸೋಜಿಗವ ನೋಡುತ್ತಿದ್ದಂತೆಯೇ ಅನೇಕರು ಹೆದರಿ ಇದಾವುದೋ ಭೂತ-ಪ್ರೇತದ ಕಾಟವಿರಬೇಕೆಂದು, ಈ ಕೇಡಿನ ಸಹವಾಸವೇ ಬೇಡ ಎಂಬಂತೆ ಓಡಿಹೋದರು. ಮತ್ತಷ್ಟು ಜನ ಇವನಾರೋ ಅತಿಮಾನುಷ ದೈವೀಪುರಷನೆ ಇರಬಹುದೇ ಎಂದು ಲೆಕ್ಕಹಾಕುತ್ತಿದ್ದರು. ಇವರಾರಿಂದಲೂ ಕಿತ್ತು ಹಾಕಲು ಸಾಧ್ಯವಿಲ್ಲದಿದ್ದರೆ ನಾನೇ ಕಿತ್ತುಹಾಕುವೆನೆಂಬಂತೆ ಪಾಳೆಯಗಾರನೇ ದೊಂಬನ ಮುಂದೆ ಬಂದು ತಿರಸ್ಕಾರದಿಂದ ಕಾಲಿನಿಂದ ಒದ್ದು ತುಳಿದು ಏಳು, ಮೇಲೇಳೋ ದೊಂಬ ಎಂದು ಗರ್ಜಿಸಿದರು. ಅದನ್ನೆಲ್ಲ ಕೇಳಿಸಿಕೊಳ್ಳುವ ಸ್ಥಿತಿಯಲ್ಲಿ

ದೊಂಬನಿರಲಿಲ್ಲ. ತಾಯಗರ್ಭಕ್ಕೆ ಹಿಂತಿರುಗಿದವನಂತೆ ಆ ದೊಂಬ ಭೂಮಿಯಾಳದವರೆಗೂ ಹಾರಿಹಾರಿ ಅಲ್ಲಲ್ಲ, ಜಾರಿ ಜಾರಿ ಇಳಿದಂತೆ, ಒಳ ಒಳಕ್ಕೆ ಹೊರಟಂತೆ ಬೆಳೆಯುತ್ತಲೇ ಸಾಗುತ್ತಿದ್ದ. ಪಾಳೆಯಗಾರ ತನ್ನೆಲ್ಲ ಶಕ್ತಿಯನನು ಬಿಟ್ಟು ಎಳೆದಾಡಿದ. ಏನೂ ಪ್ರಯೋಜನವಾಗಲಿಲ್ಲ.

..................... ....................

ಆಮೇಲೆ ಎಷ್ಟೋ ವರ್ಷಗಳು ಹಾರಿ ತೂರಿ ಹೋದವು. ಕಾಲ ಹಾರಿ ಹೋಗುತ್ತಿತ್ತು. ದೊಂಬನ ದೇಹ ಬೆಳದು ಸಾವಿರಾರು ಹೂವಾಗಿ, ಮೊಗ್ಗಾಗಿ, ಗಿಡಮರಬಳ್ಳಿಲತೆಬೀಜವಾಗಿ, ಮರವಾಗಿ ಪಚ್ಚೆ ಪೈರು ಹಸುರು ಸಿರಿಯಾಗಿ, ಹೂ ಮಣ್ಣು ಗಂಧವಾಗಿ, ಬೀಜ ಜೀವವಾಗಿ ಇಡೀ ಆ ಬಯಲೆಲ್ಲವನ್ನೂ ರಂಗುಗೊಳಿಸುವಂತೆ ಕಂಗೊಳಿಸಿ ಬೆಳೆದುಹೋಗಿತ್ತು. ಇಡೀ ಬಯಲು ಜೀವರಸದಿಂದ ಘಮಘಮಿಸುತ್ತಿತ್ತು. ಅವನ ಹೆಂಡತಿ ಮಕ್ಕಳು ಆ ಹಸಿರ ಸಿರಿಯಲ್ಲಿ ಕೇವಲ ಗತಿಸಿದ ದೇಹಾಕೃತಿಗಳಂತೆ ನೋಡುತ್ತ ಅದರೊಳಗೆ ಇಳಿಯುತ್ತಿದವು. ಭೂಮಿ ಪಲ್ಲವಿಸಿದ ಪೂರ್ವಿಕರ ನಗೆಯಂತೆ ಹೊಳೆಯುತ್ತಿತ್ತು.

ಇಡೀ ಕಥೆಯೇ ಕನಸಿನ ವಾಸ್ತವಕ್ಕೊಂದು ಅತ್ಯುತ್ತಮ ಉದಾಹರಣೆಯಾಗಿದೆ. ಇಲ್ಲಿ ಬರುವ ದೊಂಬ ತಳಸಮುದಾಯವೊಂದರ ಪ್ರತೀಕವಾದರೆ ಪಾಳೆಯಗಾರ ವ್ಯವಸ್ಥೆಯೊಂದರ ದಮನಿತ ಕ್ರಿಯೆಯ ಸಂಕೇತವಾಗುತ್ತಾನೆ. ದೊಂಬ ಕಡೆಯಲ್ಲಿ ನೆಲದಾಳಕ್ಕೆ ಬೇರುಬಿಡುತ್ತಾ ಬಿಡುತ್ತಾ.... ಹೂ ಮಣ್ಣು ಗಂಧವಾಗಿ, ಬೀಜ ಜೀವವಾಗಿ... ಪಲ್ಲವಿಸಿದ ಪೂರ್ವಿಕರ ನಗೆಯಂತೆ ಹೊಳೆಯುತ್ತಿದ್ದುದು ಧ್ವನಿಶಕ್ತಿಯಾಗಿ ಕಥೆಯ ಆತ್ಯಂತಿಕ ಪರಿಣಾಮವನ್ನು ಹೆಚ್ಚಿಸುತ್ತದೆ.

ಅಧ್ಯಾಯ ಆರು

# ಮೊಗಳ್ಳಿ ಕಥನದ ವೈಶಿಷ್ಟ್ಯ ಮತ್ತು ಸಾಧ್ಯತೆ

ಮೊಗಳ್ಳಿ ಗಣೇಶ್ ಅವರು ಒಬ್ಬ ಆಧುನಿಕ ಸೃಜನಶೀಲ ಬರಹಗಾರರು. ಚನ್ನಪಟ್ಟಣ, ರಾಮನಗರ ಬದುಕಿನ ಹಿನ್ನೆಲೆಯನ್ನಿಟ್ಟುಕೊಂಡು ಬರೆಯುವ ಅವರ ಬರವಣಿಗೆ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾಗಿರುವುದು, ಗ್ರಾಮೀಣ ಹಾಗೂ ನಗರ ನೆಲೆಯ ಬದುಕಿನ ವಿಭಿನ್ನ ಮಾದರಿಗಳನ್ನು ವೈರುಧ್ಯಗಳನ್ನು ಕಲಾತ್ಮಕತೆಯಲ್ಲಿ ಸೆರೆಹಿಡಿಯುವ ಪ್ರಸ್ತುತ ಅವರ ಕಥನಗಳು ವೈವಿಧ್ಯಮಯವೂ ಸಂವೇದನಾಶೀಲವೂ ಆಗಿರುವುದು ಅವರ ವಿಶಿಷ್ಟ ಬರವಣಿಗೆಯಿಂದ ಅರಿಯಬಹುದಾಗಿದೆ. ಮೊಗಳ್ಳಿಯವರು ತಮ್ಮ ಕಥನಗಳಲ್ಲಿ ತಮ್ಮದೇ ಆದ ಭಾಷಾಬಳಕೆ, ಶೈಲಿ, ವರ್ಣನೆ, ತಂತ್ರ, ನಿರೂಪಣಾವಿಧಾನ, ಪಾತ್ರಾಭಿವ್ಯಕ್ತಿ ಮುಂತಾದವುಗಳನ್ನು ವಿಶಿಷ್ಟಪೂರ್ಣವಾಗಿ ಬಳಸಿಕೊಂಡಿರುವುದರಿಂದ ಅವರ ಕಥನಗಳು ಓದುಗರಿಗೆ ವಿಶಿಷ್ಟ ಬಗೆಯಲ್ಲಿ ಕಾಣುತ್ತವೆ.

ಮೊಗಳ್ಳಿಯವರು ತಮ್ಮ ಕಥೆಗಳಲ್ಲಿ ತಮ್ಮ ಸಮುದಾಯದ ನಂಬಿಕೆಗಳು, ಜೀವನವಿಧಾನಗಳು, ಸಾಮಾಜಿಕ ಸ್ಥಾನಮಾನಗಳನ್ನು ಕುರಿತು ಒಟ್ಟಾರೆ ತಮ್ಮ ಜೀವನದ ಅನುಭವಗಳೆಲ್ಲ ತಮ್ಮ ಕಥನಗಳಲ್ಲಿ ಹಿಡಿದಿಟ್ಟಿದ್ದಾರೆ. ಅವರು ಯಾವುದೆ ಒಂದು ಸಿದ್ಧ ವಿಧಾನದ ಮೂಲಕ ಖಚಿತವಾದ ಅರ್ಥಪೂರ್ಣವಾದ ಅಭಿವ್ಯಕ್ತಿ ಅಸಾಧ್ಯವೆಂದು ತಿಳಿದು ತಮ್ಮದೆ ಆದ ತಮ್ಮ ಸಂಸ್ಕೃತಿಯಲ್ಲಿರುವ ಎಲ್ಲ ವಿಧಾನಗಳನ್ನು ತಮ್ಮ ಅಭಿವ್ಯಕ್ತಿ ಸಾಮಾಗ್ರಿಯನ್ನಾಗಿ ಬಳಸಿಕೊಂಡಿದ್ದಾರೆ.[೧]

ಉದಾಹರಣೆಗೆ, ತೊಟ್ಟಿಲು ಕಾದಂಬರಿಯಲ್ಲಿ ಅವರ ಸಂಪೂರ್ಣವಾದ ಸಂಸ್ಕೃತಿ ಒಳಗೊಂಡಿದೆ. ಇಲ್ಲಿ ಸದಾ ಧ್ವನಿ ತರಂಗಗಳ ಅನ್ವೇಷಣೆಯಲ್ಲೆ ಕಾಲಕಳೆಯುವ ಅದೆ ತನ್ನ ಸರ್ವಸ್ವ ಎಂದು ಜೀವಿಸುವ ರೇಡಿಯೊ ಚಿಕ್ಕಪ್ಪ; ದೊಡ್ಡ ಮನೆಯಲ್ಲಿ ಸದಾ ತೂಗಾಡುತ್ತಾ ಎಲ್ಲರನ್ನು ತನ್ನ ಮಡಿಲೊಳಗಿಟ್ಟುಕೊಂಡು ಬೆಳಸುವ ಆ ದೊಡ್ಡ ತೊಟ್ಟಿಲು; ಗಂಡನನ್ನು ಸರಿಪಡಿಸಲಾಗದಿದ್ದರೂ ಫ್ಯಾಷನ್ ಜಗತ್ತನ್ನು ಗೆಲ್ಲುವ ವೆಂಕಟಲಕ್ಷ್ಮೀ; ಮಾತು ಆಡದೆ ಎಲ್ಲರ ಸಹಾಯಕ್ಕೆ ಹೊತೊರೆಯುವ ಹಾ, ಓ, ಅಯ್ಯೋ; ಮಕ್ಕಳಿಗೆ ದೃಷ್ಟಿಯಾಗಿದೆ ಗೂಬೆಯ ಕಣ್ಣು ಅವರ ಮೇಲೆ ಬೀಳಬಾರದು ಎಂದು ತಿಳಿದು ಗೂಬೆಯನ್ನು ಕೊಲ್ಲಲು ಬೆತ್ತಲೆಯಾಗಿ ಕಾಡಿನ ಅಂಚಿಗೆ ಹೋಗುವ ಹಿರಿಯಜ್ಜಿ; ತಾನೆ ಶ್ರೇಷ್ಟ, ತಾನು ಹೇಳಿದ ಹಾಗೆ ಎಲ್ಲರೂ ಕೇಳಬೇಕು, ಸದಾ ಪ್ರಭುತ್ವ ಅಮಲಿನಲ್ಲಿಯೆ ಕುದುರೆ ಸವಾರಿ ಮಾಡುತ್ತ ಬಂದೂಕಿನ ಪ್ರಯೋಗದಲ್ಲಿ ನಿಪುಣನಾಗಿರುವ ದೊಡ್ಡಪ್ಪ; ಇಡೀ ವಿಶ್ವವೆಲ್ಲವನ್ನು ನಲಿಸುವಂತೆ ಹಾಡುವ ಯಾವ ವಿವರಗಳೂ ದೊರೆಯದೆ ಸದಾ ಇನ್ನೊಬ್ಬರ ಹಿತಕ್ಕಾಗಿ ದುಡಿದ ಮನೆಗೆಲಸದಲ್ಲಿಯೆ ತಲ್ಲೀನಳಾದ ಮೂಕಿ; ಕಿನ್ನರ ಶಿಲೆಗಳ ನಡುವಿನ ಜಲಪಾತದಲ್ಲಿ ಇದ್ದುಕೊಂಡು ಎಲ್ಲರ ಮನಸ್ಸನ್ನು ಸೆಳೆಯುವ

ಅಪ್ಸರೆ; ಅವಳನ್ನು ಮೋಹಿಸಿ ಜಲಪಾತದಲ್ಲಿ ಅವಳ ಶಾಪಕ್ಕೆ ಗುರಿಯಾಗಿ ಕಲ್ಲುಬಂಡೆಯಾದ ಪೂರ್ವಿಕ; "ಸೂಕ್ಷ್ಮ ಮನಸ್ಸಿನ ಭಗ್ನಹೃದಯಿ ಕಥೆಯ ಮಧ್ಯೆ ನಿಂತುಕೊಂಡು ತೋರುಬೆರಳಾಗಿ ಕಥೆಯನ್ನು ಹೇಳಿಕೊಂಡು ಹೋಗುವ ನಿರೂಪಕ ಸಾಹಸ, ದುಸ್ಸಾಹಸದ ಪ್ರಣಯ ಮತ್ತು ವೇದನೆಗಳು – ಎಲ್ಲವನ್ನು ಎರಕ ಹೊಯ್ದು ನಮ್ಮನ್ನು ಬೆಚ್ಚಿಸುವಂತೆ ಬೆರೆಗೆಬ್ಬಿಸಿದ್ದಾರೆ ಮೊಗಳ್ಳಿ"[೨] ಈ ರೀತಿಯಾಗಿ ಮೊಗಳ್ಳಿಯವರು ತಮ್ಮದೆ ಆದ ವಿಶಿಷ್ಟ ಕ್ರಮದಲ್ಲಿ ತಮ್ಮ ಸಂಸ್ಕೃತಿಯ ಅನುಭವವನ್ನು ಕಥನ ರೂಪದಲ್ಲಿ ತಂದಿದ್ದಾರೆ. ಇದು ಅವರ ಕಥನಗಳ ವೈಶಿಷ್ಟ್ಯತೆಯಾಗಿ ಕಂಡುಬರುತ್ತದೆ.

ಮೊಗಳ್ಳಿಯವರ ಕಥನಗಳಲ್ಲಿ ಕಥೆಗಾರನ ಗ್ರಹಿಕೆಗೆ ಒಳಪಟ್ಟ ಪಾರಂಪರಿಕ ಮೌಲ್ಯಗಳು ವರ್ತಮಾನದ ಬದುಕಿನೊಂದಿಗೆ ತಳುಕು ಹಾಕಿಕೊಂಡು ಸತ್ಯಾನ್ವೇಷಣೆಯತ್ತ ನಿರಂತರ ಪಯಣ ನಡೆಸುವ ಒಂದು ಅಂಶ ಇಲ್ಲಿಯ ಕಥನಗಳಲ್ಲಿ ಸಾಮಾನ್ಯವಾಗಿ ವ್ಯಕ್ತವಾಗುವ ವಿಶಿಷ್ಟತೆಯಾಗಿದೆ.

ಉದಾಹರಣೆಗೆ, 'ಮೋಚಿಯ ಗಂಗೆ' ಎಂಬ ಕಥೆಯಲ್ಲಿ ಚರ್ಮಕಾರನೊಬ್ಬನ ಬದುಕಿನ ಕತೆಯನ್ನು ನಿರೂಪಿಸುವುದು ಕಂಡುಬರುತ್ತದೆ. ಇದೊಂದು ಜನಪದ ಕಥೆಯ ದಾಟಿಯನ್ನು ಅನುಸರಿಸಿದೆ. ಇದರಲ್ಲಿ ಯಜಮಾನ ಎಲ್ಲ ಪಾಪಗಳನ್ನು ತೊಳೆದುಕೊಳ್ಳಲು ಕಾಶಿಯಾತ್ರೆಗೆ ಹೋಗಿ ಚರ್ಮಕಾರನಾಗಿರುವ ಮುದುಕನ ಬಳೆಯನ್ನು ಕದ್ದು ತಂದಿದ್ದ ವಿಚಾರ ಈ ಕಥೆಯ ವಸ್ತುವಾಗಿದೆ. "ಬಳೆಯ ಮಹಿಮೆ, ವೈಭವ ಮತ್ತು ಸಂಬಂಧಗಳ ಮುಖಾಂತರ ಪ್ರಕೃತಿಯ ಅನಂತತೆ ಮತ್ತು ಅಗಾಧತೆಗಳು ಸತ್ಯ ಹಾಗೂ ಭ್ರಮೆಗಳ ನಡುವಿನ ಭಿನ್ನತೆಗಳು ಶೋಧಗೊಳ್ಳುವಂತಾಗಿದೆ."[೩] ಇಲ್ಲಿ ಚರ್ಮಕಾರ ಮತ್ತು ಕಾಶೀ ಯಾತ್ರಿಕ ಯಜಮಾನನ್ನು ಮುಖಾಮುಖಿಯಾಗಿಸುವಲ್ಲಿ ನಂಬಿಕೆ, ಜಾತಿ, ಪ್ರಾಮಾಣಿಕತೆ ಮುಂತಾದ ಮೌಲ್ಯಗಳನ್ನು ಒರೆಗೆ ಹಚ್ಚಿ ನೋಡುವಂತಾಗಿರುವುದು ಇಲ್ಲಿ ಪಾರಂಪರಿಕ ಮೌಲ್ಯಗಳನ್ನು ವರ್ತಮಾನಕ್ಕೆ ಜೋಡಿಸಿ ನೋಡಿರುವುದು ಅವರ ಕಥನಕ್ರಮದ ಒಂದು ವೈಶಿಷ್ಟ್ಯವೆಂತಲೇ ಹೇಳಬಹುದು.

ಮೊಗಳ್ಳಿಯವರ ಕಥನಗಳು ಶುದ್ಧ ಸೃಜನಶೀಲತೆಯ ಪ್ರತೀಕಗಳು ಅದರಲ್ಲಿಯೆ ಮತ್ತೆ ಆ ಸೃಜನಶೀಲತೆಯ ಒಳಗಡೆ ಇನ್ನೊಂದು ಸೃಜನಶೀಲತೆಯನ್ನು ಕಟ್ಟಿಕೊಡುವುದು ಅವರ ಕಥನಗಳ ನಿರೂಪಣಾ ವಿಧಾನದ ವೈಶಿಷ್ಟ್ಯತೆಯಾಗಿದೆ.

ಉದಾಹರಣೆಗೆ, 'ಸೂರ್ಯವತಿ', 'ತೋಪು' ಮತ್ತು 'ಬಾಳು' ಕಥೆಗಳಲ್ಲಿ 'ಅನಾದಿ' ಎಂಬ ಕಾದಂಬರಿಯಲ್ಲಿ ಇಂತಹ ಒಂದು ವಿಶಿಷ್ಟತೆಯನ್ನು ಕಾಣಲಾಗುತ್ತದೆ.

ಸೂರ್ಯವತಿ ಕಥೆಯಲ್ಲಿ ಪರಂಪರೆಯ ಪ್ರತಿನಿಧಿಯಾದ ಅಜ್ಜಿ ತನ್ನ ಬದುಕಿನ ಸಂಕಟಗಳೊಂದಿಗೆ ಸಮೀಕರಿಸಿಕೊಂಡು ಸೂರ್ಯವತಿಯ ವಿವರಗಳನ್ನು ಹೊರಹಾಕುತ್ತಾಳೆ. ಸೂರ್ಯವತಿ ಒಂದು ಕಾಲದ ಅವರ ಪೂರ್ವಿಕರ ಮಗಳು.

ಮೊಗಳ್ಳಿಯವರು ಸುಮಾರು ಕಥನಗಳಲ್ಲಿ ತಮ್ಮನ್ನೇ ಒಂದು ಸುಪ್ತ ಪಾತ್ರವನ್ನಾಗಿ ಮಾಡಕೊಂಡು ಕಥನಗಳ ಎಲ್ಲಾ ಸನ್ನಿವೇಶಗಳು ತನ್ನ ಜೀವನಕ್ಕೆ ಸಂಬಂಧಿಸಿರುವುದನ್ನು ತನ್ನ ಜೀವನ ಅನುಭವಗಳೇ ಆಗಿವೆ ಎನ್ನುವ ಹಾಗೆ ಆತ್ಮಚರಿತ್ರೆ ಬರೆಯುವ ಶೈಲಿಯಲ್ಲಿ ಬರೆಯುತ್ತಾ ಹೋಗುತ್ತಾರೆ. ಉದಾಹರಣೆಗೆ, ಅತ್ತೆ ತೋಪು, ಮಿಂಚುಳ ಮುಂತಾದ ಕಥೆಗಳಲ್ಲಿ ಈ ಅಂಶವನ್ನು ಕಾಣಬಹುದು.

ಮೊಗಳ್ಳಿಯವರು ತಮ್ಮ ಕಥಗಳಲ್ಲಿ ನಿಸರ್ಗವನ್ನು ತುಂಬಾ ಚೆನ್ನಾಗಿ ಅನಾವರಣ ಮಾಡುತ್ತಾರೆ. ಓದುವಾಗ ಅಂತಹ ಒಂದು ನಿಸರ್ಗದ ವಾತಾವರಣ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಇದು ನವೋಯದಯದ ಸಾಹಿತಿಗಳ ಹಾಗೆ ನಿಸರ್ಗವನ್ನು ಇವರು ಚಿತ್ರಣ ಮಾಡುತ್ತಾ ಹೋಗುತ್ತಾರೆ.

ಉದಾಹರಣೆಗೆ, ಕಿರೀಟ ಮತ್ತು ತೊಟ್ಟಿಲು ಕಾದಂಬರಿಯಲ್ಲಿ ಇಂತಹ ನಿಸರ್ಗದ ಚಿತ್ರಣ ಕಾಣಲಾಗುತ್ತದೆ. ಕಿರೀಟ ಕಾದಂಬರಿಯಲ್ಲಿ ಶಿವಸ್ವಾಮಿಯ ಹೆಂಡತಿ ಜಿತನ ಜೊತೆ ಹಳ್ಳದ ದಂಡೆಗೆ ಹೋಗಿರುತ್ತಾಳೆ. ಅಲ್ಲದೆ ಗುಡ್ಡಗಳನ್ನು ಸುತ್ತುತ್ತಾ ಹೋಗುತ್ತಾರೆ. ತೊಟ್ಟಿಲು ಕಾದಂಬರಿಯಲ್ಲಿ ಕೆರೆಯ ಜಲಪಾತ ಅಪ್ಸರೆಯರು ಮತ್ತು ಜಲಪಾತದ ಬಂಡೆಗಳು ಇವೆಲ್ಲವು ನಿಸರ್ಗದ ವಾತಾವರಣ ಹೀಗೆ ಅವರ ಕಥನಗಳಲ್ಲಿ ನಿಸರ್ಗದ ಚಿತ್ರಣ ವಿಶಿಷ್ಟವಾದ ರೀತಿಯಲ್ಲಿ ಮೂಡಿಬಂದಿದೆ.

ತೋಪು ಕಥೆಯಲ್ಲಿ ಅದೇ ಪರಂಪರೆಯ ಪ್ರತಿನಿಧಿ ಅಜ್ಜಿ ಪತ್ರೆಮರದ ಕಥೆಯನ್ನು ಹೇಳುತ್ತಾಳೆ. ಮಕ್ಕಳು ಕೇರಿಯ ತೋಪಿನ ಬಗ್ಗೆ ಕೇಳುತ್ತಾ ಹೋದಾಗ ಆ ಅಜ್ಜಿ ಈ ಕತೆಯನ್ನು ಮಕ್ಕಳಿಗೆ ಹೇಳುತ್ತಾಳೆ. ಅದಕ್ಕೆ ಪತ್ರೆಮರ ಎಂಬ ಹೆಸರು ಹೇಗೆ ಬಂತು, ಅದರ ಹಿನ್ನೆಲೆ ಏನು? ಎಂದು ಇದರಿಂದ ತಿಳಿಯುತ್ತದೆ. ಅಜ್ಜಿ ಹೇಳಿದ ಕತೆಯ ಪ್ರಕಾರ, ಬ್ರಾಹ್ಮಣ ಹೆಣ್ಣು ಮಗಳು ಪ್ರಾತಃಕಾಲದ ಪೂಜೆಗಾಗಿ ದಿನಾಲು ಅರಣ್ಯದ ನದಿತೀರಕ್ಕೆ ಹೋಗುತ್ತಿದ್ದಳು. ಆವಾಗ ಯಾರೋ ಒಬ್ಬ ಭಿಕ್ಷುಕ ಬಂದು ಅವಳ ಎದುರು ನಿಂತು ಭಿಕ್ಷೆ ಬಟ್ಟಲನ್ನು ಹಿಡಿದು ನಿಲ್ಲುತ್ತಿದ್ದ. ಒಂದು ದಿನ ಅವಳಿಗೆ ಆ ಭಿಕ್ಷುಕನೆ ನಿನ್ನ ಗಂಡನಿದ್ದಾನೆ ಅವನಿಗೆ ಭಿಕ್ಷೆಯನ್ನು ಹಾಕು ಎಂದು ಅವಳಿಗೆ ಅಶರೀರವಾಣಿಯೊಂದು ನುಡಿಯಿತು. ಅದನ್ನು ಕೇಳಿದ ಅವಳು ಅವನನ್ನು ಕರೆದುಕೊಂಡು ಬಂದು ಅವನ ಜೊತೆ ಮದುವೆ ಆಗುತ್ತಾಳೆ. ಆದರೆ ಅವಳ ಅಗ್ರಹಾರದಲ್ಲಿ ಅವರನ್ನು ಯಾರು ಹಚ್ಚಿಕೊಳ್ಳುವುದಿಲ್ಲ. ಎಲ್ಲರು ಅವರನ್ನು ತಿರಸ್ಕಾರ ಮಾಡುತ್ತಾರೆ. ಇದನ್ನು ಸಹಿಸಿಕೊಳ್ಳಲು ಆಗದ ಆ ದಂಪತಿಗಳು ಪ್ರತಿಜ್ಞೆ ಮಾಡಿ ತಮ್ಮಿಂದಲೆ ಅವರ ಪೂಜೆ ಪುನಸ್ಕಾರವಾಗಲಿ ತಮ್ಮನ್ನು ಒಂದು ಪವಿತ್ರವಾದ ವಸ್ತುವೆಂದು ಪರಿಗಣಿಸಲಿ ಎಂದು ಇಬ್ಬರು ಸೇರಿ ಅದೆ ಅಗ್ರಹಾರದಲ್ಲಿ ಭೂಮಿಯ ಒಳಗಡೆ ಹೋಗುತ್ತಾರೆ. ಅವರು ಒಳಗಡೆ ಹೋದ ತಕ್ಷಣ ಅಲ್ಲಿ ಪತ್ರೆ ಮರ ಕಾಣಸಿಕೊಳ್ಳುತ್ತದೆ. ಹೀಗೆ ಆ ಪತ್ರೆ ಮರ ಹುಟ್ಟಿಕೊಂಡಿತು ಎಂದು ಅಜ್ಜಿ ಅದರ ಕತೆಯನ್ನು ಹೇಳುತ್ತಾಳೆ.

ಇನ್ನು 'ಅನಾದಿ' ಕಾದಂಬರಿಯಲ್ಲಿ 'ಅಮಾಸೆ' ತಾತನ ಊರಿಗೆ ಬಂದ ದಿವಸ ತಾತ ಮಾಡಿಸಿದ ಮಾಂಸದ ಊಟ ಮಾಡಿ ಬೆಳದಿಂಗಳಲ್ಲಿ ಕುಳಿತಾಗ ಅವನ ಮಗಳು ರೇವತಿ ತಂದೆಗೆ ಕಥೆ ಹೇಳು ಎಂದು ಒತ್ತಾಯ ಮಾಡುತ್ತಾಳೆ. ಅಲ್ಲಿ ಅವನ ಕತೆ ಕೇಳಲು ತಾತ, ತಾತನ ಹೆಂಡತಿ, ಕೇರಿಯ ಕ್ಯಾತಣ್ಣ ಮುಂತಾದವರು ಬೆಳದಿಂಗಳಲ್ಲಿ ಕುಳಿತಿರುತ್ತಾರೆ. ಆವಾಗ ಅಮಾಸೆ 'ಮರದ ಚೆಲುವೆಯ' ಕತೆಯನ್ನು ಹೇಳುತ್ತಾನೆ. ಈ ಕತೆ ರಾಜಕುಮಾರ ಮತ್ತು ಮಾಂತ್ರಿಕ ಸ್ವಭಾವದ ಮರದ ಚೆಲುವೆಯ ಪ್ರೇಮ ಪ್ರಸಂಗಗಳನ್ನು ಒಳಗೊಂಡ ಕತೆಯಾಗಿದೆ.

ಈ ರೀತಿಯಾಗಿ ಮೊಗಳ್ಳಿಯವರ ಕಥೆಗಳಲ್ಲಿ ಮತ್ತೆ ಒಂದೊಂದು ಕತೆಗಳನ್ನು ಹೆಣೆದಿರುವುದು ಅವರ ಕಥನ ನಿರೂಪಣೆಯ ವಿಶಿಷ್ಟತೆಯಾಗಿದೆ. ಅವರ ಕಥನದ ಬೇರುಗಳು ದಲಿತ ಸಂಸ್ಕೃತಿಯ ಆಶಯಗಳನ್ನು ಅಡಗಿಸಿಕೊಂಡ ಜಾನಪದದ ಮಣ್ಣಲ್ಲಿ ನೆಲೆಯೂರಿವೆ ಎಂಬುದನ್ನು ಅರಿಯಬಹುದಾಗಿದೆ. ಜಾನಪದದೊಂದಿಗಿನ ಇಂತಹ ಸಹಜ ಸಾವಯವ ಸಂಬಂಧದಿಂದಾಗಿಯೇ ಅವರ ಕಥನಕ್ಕೆ ವಿಲಕ್ಷಣವಾದ ಗುಣವಿದೆ. ಶೈಲಿಯೂ ಕೂಡ ವಿಶಿಷ್ಟವಾದುದಾಗಿದೆ.

ಹಿಂದಿನ ಹಲವಾರು ಕಥನಕಾರರು ಇಂತಹ ಒಂದು ನಿರೂಪಣಾ ವಿಧಾನವನ್ನು ಅಳವಡಿಸಿಕೊಂಡಿದ್ದರು. ಆದರೆ ಇವರಷ್ಟು ಗಾಢವಾಗಿ, ಸ್ಪಷ್ಟವಾಗಿ ತೆಗೆದುಕೊಂಡಿರಲಿಲ್ಲ ಎಂದು ಅನಿಸುತ್ತದೆ. ಅದಕ್ಕಾಗಿಯೇ ಅವರ ಕಥನಗಳಲ್ಲಿ ಇದೊಂದು ವಿಶಿಷ್ಟತೆಯಾಗಿ ಗುರುತಿಸಲಾಗುತ್ತದೆ.

ಮೊಗಳ್ಳಿಯವರ ಹಲವಾರು ಕಥನಗಳು ಮಕ್ಕಳಿಗೆ ಸಂಬಂಧಿಸಿದ ವಸ್ತುವನ್ನು ಒಳಗೊಂಡಿವೆ. ಇಂತಹ ಕಥನಗಳು ಬಾಲ್ಯದ ಜಗತ್ತನ್ನು ಅನಾವರಣಗೊಳಿಸುತ್ತಲೇ ದೊಡ್ಡವರ ಪಾತ್ರ ಜಗತ್ತನ್ನು ಸೃಷ್ಟಿಸುವುದು ವಿಶಿಷ್ಟವಾಗಿದೆ. ಮಗುವಿನ ಮುಗ್ಧ ಕಣ್ಣುಗಳಿಂದ ದೊಡ್ಡವರ ವರ್ತನೆಗಳನ್ನು, ಕೌಟುಂಬಿಕ ಸಂಘರ್ಷಗಳನ್ನು, ಸಾಮಾಜಿಕ ಸ್ಥಿತ್ಯಂತರಗಳನ್ನು ಚಿತ್ರಿಸುವುದು ಮೊಗಳ್ಳಿಯವರ ಬರವಣಿಗೆಯ ವೈಶಿಷ್ಟ್ಯವೆಂದೇ ಹೇಳಬಹುದಾಗಿದೆ. ಇಂತಹ ಕಥೆಗಳನ್ನು ಕೇವಲ ಬಾಲ್ಯದ ಜಗತ್ತಿಗೆ ಸಂಬಂಧಿಸಿದ ಕಥೆಗಳೆಂದಾಗಲಿ, ದೊಡ್ಡವರಿಗೆ ಸಂಬಂಧಿಸಿದ ಕಥೆಗಳೆಂದಾಗಲಿ ಬೇರ್ಪಡಿಸಲು ಸಾಧ್ಯವಿಲ್ಲ. ಇಬ್ಬರಿಗೂ ಸಂಬಂಧಿಸಿದ ವಸ್ತುಗಳು ಇಲ್ಲಿ ಅಡಗಿರುತ್ತವೆ. ಇದು ಅವರ ಕಥನ ಸಂವಿಧಾನದ ವೈಶಿಷ್ಟ್ಯವಾಗಿದೆ. ಇದೊಂದು ಅವರು ಬಳಸಿಕೊಂಡ ತಂತ್ರವೂ ಹೌದು.

ಉದಾಹರಣೆಗೆ 'ಒಂದು ಹಳೆ ಚಡ್ಡಿ' ಮತ್ತು 'ಬುಗುರಿ', 'ಆ ಅಳೂ ಈಗಲೂ' ಈ ಮೂರು ಕಥೆಗಳನ್ನು ಇದಕ್ಕೆ ನಿರ್ದರ್ಶನಗಳನ್ನಾಗಿ ನೀಡಬಹುದು.

'ಒಂದು ಹಳೆ ಚಡ್ಡಿ' ಕಥೆಯಲ್ಲಿ ಮಗು ಚಡ್ಡಿ ಹಾಕದೆ ಮದುವೆ ಮನೆಯಲ್ಲಿ ಓಡಾಡುತ್ತದೆ. ಇದನ್ನು ಅವಮಾನ ಎಂದು ತಿಳಿದ ಮಗು 'ಸಿನಿ'ಯ ತಂದೆ ನಾಗರಾಜ ಹೆಂಡತಿ ಮತ್ತು ತಂದೆಯ ಜೊತೆ ಜಗಳ ಮಾಡುತ್ತಾನೆ. ಇದರಿಂದ ಅಲ್ಲಿ ಆ ಮನೆಯ ಆರ್ಥಿಕ, ಸಾಮಾಜಿಕ ಸಮಸ್ಯೆಗಳು ಅನಾವರಣವಾಗುತ್ತಾ ಹೋಗುತ್ತವೆ. ಮೊದಲು ನೋಡಿದರೆ ಮಗು ಚಡ್ಡಿ ಹಾಕದೆ ಇರುವುದು ಮಗುವಿನ ದೃಷ್ಟಿಯಾದರೆ ಮಗು ಯಾಕೆ ಚಡ್ಡಿ ಹಾಕಿಲ್ಲ ಅವರಿಗೆ ಆರ್ಥಿಕ ಪರಿಸ್ಥಿತಿ ಚೆನ್ನಾಗಿಲ್ಲವೆಂಬ ದೃಷ್ಟಿಕೋನವೂ ಒಂದೇ ಕಾಲಕ್ಕೆ ಮನವರಿಕೆಯಾಗುತ್ತದೆ.

'ಬುಗುರಿ' ಕಥೆಯಲ್ಲಿಯೂ ಅಷ್ಟೆ. ಬಾಲಕ 'ಚಲುವ' ಬುಗರಿಯನ್ನು ಆಡಿಸುತ್ತಾ ಮಲದ ಗುಂಡಿಗೆ ಬುಗುರಿಯನ್ನು ಬೀಳಿಸುತ್ತಾನೆ. ತನ್ನ ಬುಗುರಿ ಮಲದಗುಂಡಿಗೆ ಬಿದ್ದು ಹೋದದ್ದನ್ನು ಕಂಡು ಬೆಚ್ಚಿದ ಚೆಲುವ ತನ್ನ ಮಗುವಿನ ದೃಷ್ಟಿಯಿಂದಲೇ ದೊಡ್ಡವರ ಕ್ರಿಯೆಗಳನ್ನು ಗಮನಿಸುತ್ತಾ ಹೋಗುತ್ತಾನೆ. ಅದರಿಂದ ಗ್ರಾಮದಲ್ಲಿ ಹಲವಾರು ಸಂಘರ್ಷಗಳು ಪ್ರಾರಂಭವಾಗುತ್ತವೆ.

ಅದೇ ತರಹ 'ಆ ಅಳು ಈಗಲೂ' ಎಂಬ ಕಥೆಯು ಅಷ್ಟೇ. ಹೀಗೆ ಮೊಗಳ್ಳಿಯವರ ಕಥನಗಳಲ್ಲಿ ಇಂತಹ ಹಲವಾರು ಕಥೆಗಳನ್ನು ಗಮನಿಸಲಾಗುತ್ತದೆ. ಇದು ಅವರ ಕಥನಗಳ ವೈಶಿಷ್ಟ್ಯವಾಗಿ ಕಂಡುಬರುತ್ತದೆ.

ಮೊಗಳ್ಳಿಯವರ ಕಥನಗಳು ಮೊದಲ ಓದಿಗೆ ದಲಿತ ಸಾಹಿತ್ಯ ಪ್ರಕಾರಕ್ಕೆ ಸೇರಿದಂತೆ ಕಂಡರೂ ಒಳಗೆ ಬಂಡಾಯವನ್ನು ಧ್ವನಿಸುವಂತೆ ಕಂಡುಬರುತ್ತದೆ. ಮತ್ತೊಂದು ಮಗ್ಗಲುನಿಂದ ನವೋದಯದ ಬೃಹತ್ ಕಾದಂಬರಿಗಳ ವಸ್ತುವಿನ್ಯಾಸ ಹೊಂದಿದಂತೆ ಭಾಸವಾದರೂ ಒಟ್ಟಾರೆ ಕಥನಗಳಿಗೆ ಮೊಗಳ್ಳಿಯವರದೆ ಒಂದು ತಂತ್ರ ವೈಶಿಷ್ಟ್ಯತೆ, ಶೈಲಿ, ಕಂಡುಬರುತ್ತದೆ.

ಉದಾಹರಣೆಗೆ ತೊಟ್ಟಿಲು ಎಂಬ ಕಾದಂಬರಿಯನ್ನು ನೋಡಬಹುದು. ತೊಟ್ಟಿಲು ಕಾದಂಬರಿಯಲ್ಲಿ ದಿಬ್ಬದ ಮನೆ, ತಗ್ಗಿನ ಮನೆ  ಎಂಬ ಸಾಮಾಜಿಕ ಶ್ರೇಣಿಗಳನ್ನು ಮಾಡಿ ದಿಬ್ಬದ ಮನೆ ಮೇಲ್ಜಾತಿಯವರ ಬದುಕಾದರೆ ತಗ್ಗಿನ ಮನೆ ದಲಿತರ ಕೇರಿಯಾಗಿದೆ. ಇಲ್ಲಿ ತಗ್ಗಿನ ಮನೆಯವರು ತಮ್ಮದೆ ಆದ ಜೀವನಶೈಲಿ, ಬದುಕನ್ನು

ರೂಪಿಸಿಕೊಂಡು ದಿಬ್ಬದ ಮನೆಯವರ ಕೈಕೆಳಗೆ ಕೂಲಿಮಾಡಿ ಹೊಟ್ಟೆ ತುಂಬಿಸಿಕೊಂಡು ತಮ್ಮ ತಮ್ಮ ಪಾಡು ಅಷ್ಟೇ ಎಂದು ತಿಳಿದು ನೆಮ್ಮದಿಯನ್ನು ಕಾಣುತ್ತಾರೆ. ಹಬ್ಬ ಹರಿದಿನಗಳನ್ನು ಎಲ್ಲರೂ ಕೂಡಿ ಆಚರಣೆ ಮಾಡುತ್ತಾರೆ. ಇದು ದಲಿತ ಜಗತ್ತನ್ನು ಅನಾವರಣಗೊಳಿಸುತ್ತದೆ. ಕಾದಂಬರಿಯಲ್ಲಿ ನಂತರ 'ಭೂಮಿ' ವಿಷಯಕ್ಕೆ ಸಂಬಂಧಿಸಿದಂತೆ ದಿಬ್ಬದ ಮನೆಯವರಿಗೂ ಮತ್ತು ತಗ್ಗಿನ ಮನೆಯವರಿಗೂ ಜಗಳ ಪ್ರಾರಂಭವಾಗಿ ಅದು ಹೋರಾಟವಾಗಿ ಮಾರ್ಪಟ್ಟು ಕೊನೆಗೆ ಅವರಿಂದ ಕೇರಿಯವರು ಭೂಮಿಯನ್ನು ಪಡೆದುಕೊಳ್ಳುತ್ತಾರೆ.

ಮೊಗಳ್ಳಿಯವರ ತೊಟ್ಟಿಲು ಕಾದಂಬರಿಯು ವಸ್ತು, ತಂತ್ರ, ಶೈಲಿ ಮತ್ತು ನಿರೂಪಣಾ ವಿಧಾನದಿಂದ ಗಮನಿಸುವುದಾದರೆ ನವೋದಯ ಕಾಲದ ಬೃಹತ್ ಕಾದಂಬರಿಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಅಂತೆಯೇ ಈ ಕಾದಂಬರಿಯು ವಸ್ತು, ತಂತ್ರ, ಶೈಲಿಗಳಿಂದ ಯಶಸ್ವಿಯಾದ ಕಾದಂಬರಿಯಾಗಿದೆ. ಇತ್ತೀಚಿಗೆ ಬಿಡುಗಡೆಯಾದ ಅನಾದಿ ಕಾದಂಬರಿ ವಸ್ತುಗಿಂತಲೂ ಭಿನ್ನವಾದ ವಸ್ತುವನ್ನು ಒಳಗೊಂಡಿದೆ.

ಅಂತೆಯೇ ಅನಾದಿ ಕಾದಂಬರಿ ಕೂಡ ಈವರೆಗೆ ಕನ್ನಡ ಸಾಹಿತ್ಯದ ಪರಿಧಿಗೆ ಬಾರದ, ಸಮಾಜದ ಕಟ್ಟಕಡೆಯ ಅಸ್ಪೃಶ್ಯರಿಗೂ ಅಸ್ಪೃಶ್ಯರಾದ ಸಮುದಾಯವೊಂದನ್ನು ಚಿತ್ರಣವನ್ನು ಒಳಗೊಂಡಿದೆ. ಅನಾದಿ ಕಾದಂಬರಿಯಲ್ಲಿ ಮೊಗಳ್ಳಿಯವರ ಪ್ರತಿಭೆಯ ಸಾಧ್ಯತೆಗಳ ವಿಸ್ತರಣೆಯನ್ನು ಕಾಣಬಹುದಾಗಿದೆ. ಮೊಗಳ್ಳಿಯವರ ಕಥನ ಪ್ರತಿಭೆಯು ಕೃತಿಯಿಂದ ಕೃತಿಗೆ ಹೇಗೆ ವಿಸ್ತರಿಸಿದೆ ಮತ್ತು ಸಾಫಲ್ಯವನ್ನು ಕಂಡುಕೊಂಡಿದೆಯೆಂಬುದಕ್ಕೆ ಈ ಕೃತಿ ನಿದರ್ಶನ.

ಮೊಗಳ್ಳಿಯವರ ಕಲಾತ್ಮಕ ಜಗತ್ತಿನಲ್ಲಿ ಕಂಡು ಬರುವ ದಲಿತ ಸಮುದಾಯವು ತಮ್ಮದೇ ಆದ ಜೀವನ ಶೈಲಿಯನ್ನು ಅಳವಡಿಸಿಕೊಂಡು ಅದರಲ್ಲಿಯೆ ನೆಮ್ಮದಿಯನ್ನು ಕಾಣುತ್ತಾರೆ. ಅವರಿಗೂ ಒಂದು ಸುಂದರವಾದ ಜೀವನವಿದೆ. ಅವರು ಕೇವಲ ಅನ್ಯಾಯ, ಹಿಂಸೆ, ಅತ್ಯಾಚಾರಗಳ ಜೀವನ ಅವರಲ್ಲಿ ಕಂಡುಬರುವುದಿಲ್ಲ. ಬಂಡಾಯ ಲೇಖಕರಾದ ಕುಂ.ವೀ.ಯವರ ಸಾಹಿತ್ಯದಲ್ಲಿ ದಲಿತರು ಯಾವಾಗಲೂ ಹಸಿವು, ಹಿಂಸೆ, ಕ್ರೌರ್ಯಗಳ ಕರಿನೆರಳಲ್ಲಿಯೇ ಮುಳುಗಿ ಹೋಗಿರುವುದನ್ನು ಕಾಣಬಹುದು. ಇದಕ್ಕೆ ನಿದರ್ಶನ ಅವರ ಕತ್ತಲನು ತ್ರಿಶೂಲ ಹಿಡಿದ ಪ್ರಸಂಗವನ್ನು ಗಮನಿಸಬಹುದು. ಮೊಗಳ್ಳಿಯವರ ಕಥನಗಳಲ್ಲಿ ಇಂತಹ ಸನ್ನಿವೇಶಗಳನ್ನು ಕಾಣಲಾಗುವುದಿಲ್ಲ. ಮೇಲ್ಜಾತಿಯವರು ಇವರನ್ನು ಶೋಷಣೆ ಮಾಡಿದರೂ ಸಹಿತ ಅದನ್ನು ಮಾನವ ವಿಕೃತಿಗಳೆಂದು ತಿಳಿಯುತ್ತಾರೆ ಹೊರೆತು ಅದನ್ನು ಹಿಂಸೆಯಿಂದಲೇ ನಿಂದಿಸಬೇಕು ಎಂಬುದು ಅವರ ಆಶಯವಾಗುವುದಿಲ್ಲ. ದಲಿತರಲ್ಲದ 'ಕುಂವೀ' ದಲಿತ ಜಗತ್ತನ್ನು ತಿರುಚಿ ಹುಸಿ ಬಂಡಾಯದ ನೆಲೆಯಲ್ಲಿ ವಿಕೃತವಾಗಿ ಅಭಿವ್ಯಕ್ತಿಸುತ್ತಾರೆ. "ಜಗತ್ತಿನ ಎಲ್ಲ ದಮನಿತ ಸಮುದಾಯಗಳಂತೆ ಈ ಸಮುದಾಯವು ಅಂತಃಕರಣ ಪಕ್ಷದ ಪರವಾಗಿದೆಯೇ ಹೊರತು ನ್ಯಾಯದ ಪರವಾಗಿ ಇರುವುದಿಲ್ಲ"[೬] ಎಂದು ಹೇಳಲಾಗುತ್ತದೆ. ಅದಕ್ಕಾಗಿಯೆ ರಾಜೇಂದ್ರ ಚೆನ್ನಿ ಅವರು ಇವರ ಸಮುದಾಯವು ಮತ್ತು ಇವುಗಳಲ್ಲಿ ಯನ್ನು ಮಾತ್ರ ಅಪೇಕ್ಷಿಸುವುದು ಎಂದು ಅಭಿಪ್ರಾಯಪಡುತ್ತಾರೆ. ಇಂತಹ ಒಂದು ವಿಶಿಷ್ಟ ತಂತ್ರವನ್ನು ಇಲ್ಲಿ ಕಾಣಲಾಗುತ್ತದೆ. ಇದು ಅವರ ಕಥನಗಳ ವೈಶಿಷ್ಟ್ಯತೆಯ ಪ್ರತೀಕವಾಗಿ ಕಂಡುಬರುತ್ತದೆ.

ಉದಾಹರಣೆಗೆ ಬತ್ತ, ತೋಪು, ಮಿಂಚುಳ, ತೊಟ್ಟಿಲು, ಅನಾದಿ ಮುಂತಾದ ಕಥನಗಳಲ್ಲಿ ಕಂಡುಬರುವ ದಲಿತ ಸಮುದಾಯಕ್ಕಿಂತ ತೊಟ್ಟಿಲು ಕಾದಂಬರಿಯಲ್ಲಿ ಚಿತ್ರಿತವಾದ ದಲಿತ ಸಮುದಾಯದಲ್ಲಿ ಸ್ವಲ್ಪಮಟ್ಟಿನ ಹೋರಾಟವನ್ನು ಕಾಣಬಹುದಾದರೂ ಎಲ್ಲಿಯೂ ಹಿಂಸೆಯನ್ನು ಕಾಣಲಾಗುವುದಿಲ್ಲ. ಬತ್ತ ಕಥೆಯಲ್ಲಿ ಕಂಡುಬರುವ ದಲಿತ ಸಮುದಾಯ ಬತ್ತಕ್ಕೂ ಸಂಬಂಧಿಸಿದ ಹಾಗೆ ಊರಿನ ಒಡೆಯರು ಇವರ ಮೇಲೆ ಹಿಂಸೆಯನ್ನು

ಮಾಡಿದರೆ ದಲಿತರು ಮರಳಿ ಅವರ ಮೇಲೆ ಯಾವ ಹಿಂಸೆಯನ್ನೂ ಮಾಡುವುದಿಲ್ಲ. ಶಾಂತವಾಗಿ ಅದನ್ನು ಅನುಭವಿಸುತ್ತಾರೆ. ಅದನ್ನೊಂದು ಮನುಷ್ಯ ವಿಕೃತಿ ಎಂದು ಸಮಾಧಾನವಾಗುತ್ತಾರೆ.

ಅದೇ ತರಹ ತೋಪು ಕಥೆಯಲ್ಲಿ ದಲಿತರು ತಮ್ಮ ತೋಪನ್ನು ಊರಿನ ಗೌಡ ನಾಶಪಡಿಸಿ ಮರಗಳನ್ನು ಕಡಿದು ಸಾಗಿಸಿದರೂ ಸಹಿತ ಅದನ್ನು ಪ್ರತಿಭಟನೆ ಮಾಡುವುದಿಲ್ಲ. ಹೀಗೆ ಇಂತಹ ಒಂದು ದಲಿತ ಸಾಹಿತ್ಯದ ಬದಲಾವಣೆ ಅವರ ಕಥನಗಳ ವಿಶಿಷ್ಟತೆಯಾಗಿದೆ.

ಮೊಗಳ್ಳಿಯವರ ಹಲವಾರು ಕಥೆಗಳಲ್ಲಿ ಪ್ರಾಣಿಗಳ ಸಂಭಾಷಣೆಯನ್ನು ಕಾಣಲಾಗುತ್ತದೆ. ಅಲ್ಲದೆ ಅವು ಇಲ್ಲಿ ಒಂದೊಂದು ಪಾತ್ರಗಳಾಗಿ ರಚನೆಯಾಗಿರುವುದು ಕಂಡುಬರುತ್ತದೆ. ಪ್ರಾಣಿ ಪ್ರಾಣಿಗಳ ಮಧ್ಯೆ ನಡೆಯುವ ಸಂಭಾಷಣೆ ಮತ್ತು ಮನುಷ್ಯರ ಜೊತೆ ಪ್ರಾಣಿಗಳ ಸಂಭಾಷಣೆ ಈ ಎರಡು ಕ್ರಮಗಳನ್ನು ಇವರ ಕಥನಗಳಲ್ಲಿ ಕಾಣಲಾಗುತ್ತದೆ. ಇದು ಅವರ ಕಥನಗಳ ವಿಶಿಷ್ಟ ಪಾತ್ರ ರಚನೆಯ ಕ್ರಮವಾಗಿದೆ.

ಉದಾಹರಣೆಗೆ, ಕಿರೀಟ, ಅನಾದಿ, ಪ್ರಾಣಿಗಳು ಮುಂತಾದ ಕಥೆಗಳಲ್ಲಿ ಇಂತಹ ರಚನೆಯನ್ನು ಕಾಣುತ್ತೇವೆ. ಕಿರೀಟ ಕಾದಂಬರಿಯಲ್ಲಿ ಮೇಕೆ ಒಂದು ಪಾತ್ರವಾಗಿದೆ. ಈ ಮೇಕೆ ದ್ಯಾವಪ್ಪನವರ ಜೊತೆ ಅವರ ಹೆಂಡತಿಯ ಜೊತೆ ಭಾವನಾತ್ಮಕವಾಗಿ ಅಮೂರ್ತ ಸಂಭಾಷಣೆಯನ್ನು ಮಾಡುತ್ತದೆ. ಅದೆ ತರಹ ದ್ಯಾವಪ್ಪನವರ ಕೊಟ್ಟಿಗೆಯಲ್ಲಿರುವ ಎಮ್ಮೆ, ಆಕಳು, ನಾಯಿ ಮುಂತಾದ ಪ್ರಾಣಿಗಳ ಜೊತೆಗೆ ತನ್ನ ಭಾವನೆಯ ಮೂಲಕ ತನ್ನ ಮಾತನ್ನು ಹೊರಹಾಕುತ್ತಿರುತ್ತದೆ.

ಅನಾದಿ ಕಾದಂಬರಿಯಲ್ಲಿಯೂ ಅಷ್ಟೆ ಅಮಾಸೆಯು ಕುದುರೆ ಮತ್ತು ಅಗಸನ ಕತ್ತೆಗಳು ತಾತನ ನಾಯಿ ಪರಸ್ಪರ ಸಂಭಾಷಣೆಯನ್ನು ನಡೆಸುತ್ತವೆ.

ಇಲ್ಲಿ ಪ್ರಾಣಿಗಳ ಸಂಭಾಷಣೆ ಎಂದರೆ ಅವು ಬಾಯಿಬಿಟ್ಟು ಮನುಷ್ಯನ ಹಾಗೆ ಮಾತನಾಡದೆ ಅವುಗಳ ಭಾವನೆಗಳ ಮೂಲಕ ಅವು ಏನು ಮಾತನಾಡುತ್ತವೆ ಎಂಬುದನ್ನು ಲೇಖಕರು ನಿರೂಪಣಾ ವಿಧಾನದಲ್ಲಿ ತರುತ್ತಾರೆ. ಮೊಗಳ್ಳಿಯವರ ವಿಶಿಷ್ಟ ರಚನಾವಿಧಾನ ಇದೆಂದು ಹೇಳಬಹುದು.

ಮೊಗಳ್ಳಿಯವರ ಕಥನಗಳಲ್ಲಿ ಜನಪದ ಮತ್ತು ಶಿಷ್ಟ ಎರಡು ಸಾಹಿತ್ಯದ ಹದವಾದ ಮಿಶ್ರಣ ಕಂಡುಬರುತ್ತದೆ. ಇಲ್ಲಿಯ ವಿಷಯ ವಸ್ತುಗಳು, ನಿರೂಪಣಾ ವಿಧಾನ, ಕಥನ ತಂತ್ರ, ಕಥನದ ಪಾತ್ರಗಳು ಎರಡೂ ಪರಂಪರೆಯಿಂದ ಪ್ರೇರಣೆ ಪಡೆದುಕೊಂಡು ಅವರ ಸೃಜನಶೀಲತೆಯಲ್ಲಿ ಅರಳುತ್ತವೆ. ಹಲವಾರು ಶಿಷ್ಟ ಸಾಹಿತಿಗಳು ಜನಪದವನ್ನು ಬಳಸಿಕೊಂಡು ರಚನೆ ಮಾಡಿರಬಹುದು. ಅವರು ಜನಪದ ಕಥಾವಸ್ತುವನ್ನು, ಜನಪದ ಭಾಷೆಯನ್ನು ಶಿಷ್ಟಕ್ಕೆ ಹೊಂದಿಸಿಕೊಂಡು ಪ್ರಯೋಗ ಮಾಡಿರುತ್ತಾರೆ. ಇಂಥಲ್ಲಿ ಶಿಷ್ಟದ ಶರೀರದೊಳಗಡೆ ಜನಪದದ ರಕ್ತಮಾಂಸಗಳನ್ನು ತುಂಬುವ ಕೃತ್ರಿಮ ಪ್ರಯತ್ನಗಳಾಗಿ ಇವು ಗೋಚರಿಸುತ್ತವೆ. ಆದರೆ ಮೊಗಳ್ಳಿಯವರ ಧಾರಣ ಶಕ್ತಿಯಿಂದಾಗಿ ಅವರ ಸೃಜನಶಲೀತೆಯ ಬೇರುಗಳು ಜನಪದದ ನೆಲದಲ್ಲಿ ಬೇರೂರಿ ವಿಶಿಷ್ಟ ಕಲಾತ್ಮಕತೆಯಲ್ಲಿ ರೂಪು ಪಡೆಯುವ ಕಲಾಕೃತಿಗಳಾಗಿ ಹೊರಹೊಮ್ಮುವುದನ್ನು ಕಾಣಬಹುದು. ಇದು ನಿಜಕ್ಕೂ ಶ್ರೇಷ್ಠ ಲೇಖಕನೊಬ್ಬ ತಳಸಮುದಾಯಗಳ ಸಾಂಸ್ಕೃತಿಕ ಪರಂಪರೆಯನ್ನು ಒಳಗು ಮಾಡಿಕೊಳ್ಳುವ ಸಹಜ ಸಾವಯವ ಪ್ರಕ್ರಿಯೆಯಾಗಿದೆ. ಉದಾಹರಣೆಗೆ ಕೆಲವು ಕಥೆಗಳನ್ನು ಹೆಸರಿಸಬಹುದು. ಮೋಚಿಯ ಗಂಗೆ, ಚೆಲುವೆಯ ಮೇಲೊಂದು ಯುದ್ಧ ಪಕ್ಷಿ, ಪ್ರಾಯ್ಡ್ ಹೇಳಿದ ಕೊನೆಯ ಕತೆ ಇವು ಸಂಪೂರ್ಣವಾಗಿ ಮೊಗಳ್ಳಿಯವರಲ್ಲಿ ಪುನರ್‌ಸೃಷ್ಟಿಗೊಂಡ ಆಧುನಿಕ ಮಾಂತ್ರಿಕ ಮತ್ತು ರಮ್ಯಕಥೆಗಳಾಗಿವೆ.

ಇನ್ನು ತೊಟ್ಟಿಲು ಕಾದಂಬರಿಯ ಪಿರನ ಪಾತ್ರ, ಅನಾದಿ ಕಾದಂಬರಿಯ ಲಕ್ಷ್ಮಮ್ಮನ ಪಾತ್ರ, ಕಿರೀಟ ಕಾದಂಬರಿಯ ಶಿವಸ್ವಾಮಿ, ಮಣ್ಣು ಕಥೆಯ ಮೋಡಿ ರಾಮಯ್ಯ ಮುಂತಾದ ಪಾತ್ರಗಳು ಮಾಂತ್ರಿಕ ಪಾತ್ರಗಳು. ಇಲ್ಲಿನ ಮಾಂತ್ರಿಕ ನಿರೂಪಣೆ ಮತ್ತು ಶೈಲಿ, ರೂಪಕಶಕ್ತಿ ಬೆರಗು ಹುಟ್ಟಿಸುತ್ತದೆ.

ಮೊಗಳ್ಳಿಯವರ ಕಥನದ ಶೈಲಿ ತುಂಬಾ ವಿಶಿಷ್ಟವಾಗಿದೆ. ಅವರ ಕಥನ ಗದ್ಯ, ಪದ್ಯ ಮಿಶ್ರಿತ ಭಾವಗೀತಾತ್ಮಕ ಶೈಲಿಯನ್ನು ಒಳಗೊಂಡಿದೆ. ಇದೊಂದು ವಿಶಿಷ್ಟವಾದ ರಚನಾಶೈಲಿಯೆಂದು ಹೇಳಬಹುದು. ಓದುಗರಿಗೆ ಏಕಕಾಲಕ್ಕೆ ಕಾವ್ಯದ ಅನುಭವವನ್ನು ಶ್ರೇಷ್ಠ ಗದ್ಯದ ಅನುಭಾವವನ್ನು ಒಟ್ಟೊಟ್ಟಿಗೆ ನೀಡುವುದು ಮೊಗಳ್ಳಿಯವರ ಕಥನದ ವಿಶಿಷ್ಟ ಲಕ್ಷಣವಾಗಿದೆ. ಇದು ಇವರ ಕಥನ ಸಂವಿಧಾನದ ಅಂತರ್ಗತ ಭಾಗವಾಗಿಯೇ ಬಂದು ವಸ್ತು, ನಿರೂಪಣೆ, ಎಲ್ಲವನ್ನೂ ಒಳಗೊಂಡಂತೆ ಅವರದೇ ಆದಂತಹ ವಿಶಿಷ್ಟ ಶೈಲಿಯೊಂದನ್ನು ರೂಪಿಸಿಕೊಂಡುದಾಗಿದೆ.

ಅದಕ್ಕಾಗಿಯೆ ಮಣ್ಣು ಕಥಾಸಂಕಲನದ ಬೆನ್ನುಡಿಯಲ್ಲಿ ಆ ಕಥೆಗಳ ಬಗ್ಗೆ ಬರೆಯುವಾಗ ಹೀಗೆ ಬರೆಯುತ್ತಾರೆ. "ಉತ್ಕಟ ಕಾವ್ಯಾತ್ಮಕ ದೀಪ್ತಿಯಿಂದ ಬೆಳಗುವ ಈ ಕಥೆಗಳು ರೂಪಕ ಭಾಷೆಯಲ್ಲಿ ತನ್ನ ಜನಾಂಗದ ಅಂತಃ ಕರಣವನ್ನು ಜಗತ್ತಿನ ಈ ಹೊತ್ತಿನ ಮುಂದೆ ಅನಾವರಣಗೊಳ್ಳುತ್ತಿರುವುದು ವಿಶೇಷವಾಗಿದೆ" ಎಂದು (ಮಣ್ಣು ಕಥಾಸಂಕಲನದ ಬೆನ್ನುಡಿ). ಹೀಗೆ ಇವರ ಕಥನಗಳ ಶೈಲಿ ವಿಶಿಷ್ಟವಾಗಿ ಕಂಡುಬರುತ್ತದೆ.

ಉದಾಹರಣೆಗೆ ಮೋಚಿಗಂಗೆ, ಸೂರ್ಯವತಿ, ಪ್ರಾಣಪಕ್ಷಿಯ ತೊಟ್ಟಿಲು ಮುಂತಾದ ಕಥೆಗಳು ಶ್ರೇಷ್ಠ ರೂಪಕಗಳಾಗಿ ಕಾವ್ಯರೂಪಕಗಳನ್ನು ಮೀರಿಸುವಂತಿವೆ.

ಮೊಗಳ್ಳಿಯವರು ತಮ್ಮ ಕಥನಗಳಲ್ಲಿ ವಿಶಿಷ್ಟವಾದ ನಿರೂಪಣಾ ವಿಧಾನವನ್ನು ಬಳಸಿಕೊಂಡಿದ್ದಾರೆ. ಬೇರೆ ಕಥನಕಾರರ ಹಾಗೆ ತಮ್ಮ ಕಥನಗಳಲ್ಲಿ ಪ್ರಾದೇಶಿಕ ನುಡಿಗಟ್ಟುಗಳ ಹೊರೆಯನ್ನು ಪಾತ್ರಗಳ ಮೇಲೆ ಹೇರುವುದಿಲ್ಲ. ಅಜ್ಜಿ ಮೊಮ್ಮಕ್ಕಳಿಗೆ ಕಥೆ ಹೇಳುವ ರೀತಿಯಲ್ಲಿ ತಾವೆ ಎಲ್ಲ ಪಾತ್ರಗಳ ಅಭಿವ್ಯಕ್ತಿಯನ್ನು ಮಾಡುತ್ತಾ ಹೋಗುತ್ತಾರೆ. ಬಹುತೇಕ ಕಥನಗಳಲ್ಲಿ ನಿರೂಪಕ ಇಲ್ಲಿ ಒಂದು ಸುಪ್ತ ಪಾತ್ರವಾಗಿ ತನ್ನ ತೋರು ಬೆರಳಿನಿಂದ ಕತೆಯನ್ನು ಹೇಳುತ್ತಾ ಹೋಗುತ್ತಾನೆ. ಇಂತಹ ಒಂದು ವಿಶಿಷ್ಟವಾದ ನಿರೂಪಣಾ ತಂತ್ರ ಇಲ್ಲಿ ಕಂಡುಬರುತ್ತದೆ. ಇದು ಅವರ ಕಥನಶೈಲಿಯ ವಿಶಿಷ್ಟತೆಯಾಗಿದೆ. ಮೊಗಳ್ಳಿಯವರ ಕಥನದ ಭಾಷೆಯು ತುಂಬಾ ವಿಶಿಷ್ಟವಾದುದು. ಅವರು ಇವುಗಳಲ್ಲಿ ಭಾಷೆಯನ್ನು ಬಳಸಿಕೊಂಡಿರುವ ಪರಿ ಓದುಗರನ್ನು ಆಶ್ಚರ್ಯಗೊಳಿಸುತ್ತದೆ. "ಶಿಲ್ಪಿಗಳು ಬೆಟ್ಟವನ್ನು ಕಡಿದು ಪ್ರತಿಮೆಗೊಳಿಸುವ ತನ್ಮಯತೆಯಲ್ಲಿ ಪದಗಳನ್ನು ಜೋಡಿಸುತಾ ಪ್ರತಿಮೆಗಳನ್ನು ಕಟ್ಟುತ್ತಾ ಹೋಗುತ್ತಾರೆ."[೫]

ಉದಾಹರಣೆಗೆ, ಕಾಲದ ಬಗ್ಗೆ ಅವರ ಹಲವು ವಾಕ್ಯಗಳು.

"ಕಾಲ ನಮ್ಮನ್ನೆಲ್ಲ ಜಗಿಯುತ್ತಿದ್ದಂತೆ ನಮ್ಮ ನೆನ್ನೆಗಳೇ ನಮಗೆ ಮರೆಯಾಗಿ ಹೋಗಿದ್ದವು. ಕಾಲದ ಭರ್ಜಿ ಮೊನೆ ಮೇಲೆ ಮನವ ಕೂರಿಸಿ ನೆನ್ನೆಯನ್ನು ಇವತ್ತಿನ ಬದುಕಲ್ಲಿ ನೇಯುತ್ತಾ ಈ ಕ್ಷಣದ ನಾಳೆಯ ನಿರೀಕ್ಷೆಯ ಮರೀಚಿಕೆಯಲ್ಲಿ ತೀರಿಸುತ್ತಾ...." (ತೊಟ್ಟಿಲು ಕಾದಂಬರಿ, ಪು. ೯೧) ಹೀಗೆ ಅವರ ಭಾಷೆಯ ಬಳಕೆ ತುಂಬಾ ವಿಶಿಷ್ಟವಾದುದಾಗಿದೆ.

## ಮೊಗಳ್ಳಿ ಕಥನದ ಸಾಧ್ಯತೆಗಳು

ಮೊಗಳ್ಳಿಯವರ ಕಥನದ ವೈಶಿಷ್ಟ್ಯಗಳನ್ನು ವಿಶ್ಲೇಷಿಸಿದಂತೆ ಅವರ ಕಥನದ ಸಾಧ್ಯತೆಗಳನ್ನೂ ಇಲ್ಲಿ ಕಂಡುಕೊಳ್ಳಬಹುದಾಗಿದೆ. ಇಲ್ಲಿ ಅವರ ಕಥನದ ಸಾಧ್ಯತೆಗಳೆಂದರೆ ಇನ್ನು ಮುಂದೆ ಅವರ ಬರವಣಿಗೆಯು ಪಡೆದುಕೊಳ್ಳಬಹುದಾದ ಸ್ವರೂಪ, ಭಿನ್ನ ಬಗೆಯ ಆಯಾಮುಗಳನ್ನು, ಅದರ ವೈವಿಧ್ಯತೆಯನ್ನು ಚರ್ಚಿಸುವುದಾಗಿದೆ. ಈ ಕುರಿತಾದ ಚರ್ಚೆಗೆ ಅವರ ಇನ್ನೂ ಪೂರ್ಣಗೊಳ್ಳದ 'ಗತಿ' ಕಾದಂಬರಿಯ ಕೆಲ ಭಾಗಗಳನ್ನು ವಿಶ್ಲೇಷಿಸಣೆಗೆ ಆಯ್ದುಕೊಳ್ಳಲಾಗಿದೆ. 'ಗತಿ' ಕಾದಂಬರಿಯಲ್ಲಿ ಮೊಗಳ್ಳಿಯವರು ಭಿನ್ನವಾದ ವಸ್ತುವನ್ನು ಆಯ್ದುಕೊಂಡಿದ್ದಾರೆ.

ಸ್ವತಃ ಮೊಗಳ್ಳಿಯವರೇ 'ಗತಿ' ಕಾದಂಬರಿಯ ಕುರಿತಾಗಿ ಈ ಕೆಳಗಿನಂತೆ ವಿವರಿಸುತ್ತಾರೆ.

> ಹಂಪಿಯೊಂದಿಗಿನ ದಶಕಗಳ ಒಡನಾಟವು ನನ್ನ ಸೃಜನಶೀಲ ಮನಸ್ಸನ್ನು ಕೆಣಕುತ್ತಲೇ ಇತ್ತು. ಮತ್ತು ಅದರ ಸುತ್ತಣ ಪರಿಸರವು ನನ್ನನ್ನು ಗಾಢವಾಗಿ ಕಲಕಿದೆ. ಈ ಕುರಿತು ಕೆಂಡಸಂಪಿಗೆಯಲ್ಲಿ ಹಂಪಿ ಡೈರಿಯೆಂದು ಬರೆಯಹೊರಟವನಿಗೆ ವರ್ತಮಾನದಲ್ಲೂ ಜೀವ ಪಡೆದುಕೊಂಡು ಇಣುಕು ಹಾಕುತ್ತಿದ್ದ ಚರಿತ್ರೆಯ ಸಂಗತಿಗಳನ್ನು ಲೇಖನಗಳ ರೂಪದಲ್ಲಿ ಅಭಿವ್ಯಕ್ತಿಸುವುದಕ್ಕಿಂತ ಸೃಜನಶೀಲ ರೂಪದಲ್ಲಿ ಅಭಿವ್ಯಕ್ತಿಸುವುದು ಹೆಚ್ಚು ಸೂಕ್ತವೆನಿಸಿತು. ಜಗತ್ತಿನ ಮಹಾ ಸಾಮ್ರಾಜ್ಯವೊಂದರ ಉತ್ಕರ್ಷ ಮತ್ತು ಅದರ ಪತನ ಮನುಷ್ಯನ ಮಹತ್ವಾಕಾಂಕ್ಷೆಗಳನ್ನು ಮತ್ತು ಮಿತಿಗಳನ್ನು ತೋರ್ಪಡಿಸುತ್ತದೆ. ಆದಿಮ ಕಾಲದಿಂದ ಹಿಡಿದು ವರ್ತಮಾನದವರೆಗೂ ಇರುವ ಮನುಷ್ಯನ ಅನಂತತೆಯ ದಾಹದ, ಮನುಷ್ಯ ಸಂಬಂಧಗಳ ನಡುವಿನ ವೈರುಧ್ಯಗಳ, ಪ್ರೀತಿ ಪ್ರೇಮುಗಳ ದಿವ್ಯತೆಯ ಅಂತೆಯೇ, ರಾಜ್ಯಶಾಹಿಯ ಕ್ರೌರ್ಯ ಮತ್ತು ವಿಕೃತಿಗಳ ಪ್ರತೀಕವಾದ ವಿಜಯನಗರವು ನನ್ನನ್ನು ಕಾಡಿದ ಪರಿಯೇ ಈ ಕಾದಂಬರಿಗೆ ಪ್ರೇರಣೆ.
>
> ಇಲ್ಲಿನ ಪ್ರತಿ ಸ್ಮಾರಕಗಳು, ಬೆಟ್ಟಗುಡ್ಡಗಳು, ಕೋಟೆ ಕಂದಕಗಳು, ಛಿದ್ರಗೊಂಡ ಪ್ರತಿಮೆಗಳು ಒಂದಕ್ಕೊಂದು ಸಂಬಂಧ ಪಡೆದುಕೊಂಡು ಏಕವಾಗಿ ಪಂಥಾಹ್ವಾನ ನೀಡಿ ಸೃಜನಶೀಲ ಅಖಾಡಕ್ಕಿಳಿದು ತಮ್ಮೊಂದಿಗೆ ಸೆಣಸುವಂತೆ ಮಾಡಿದುದರ ಪರಿಣಾಮವೇ ಈ ಕಾದಂಬರಿ. ಉಚ್ಛ್ರಾಯದ ಸ್ಥಿತಿಯಲ್ಲಿದ್ದ ರಾಜಧಾನಿ ಹಂಪಿ ವಿನಾಶದ ಮುನ್ನ ಅನುಭವಿಸುತ್ತಿದ್ದ ದಿವ್ಯ ಪ್ರಶಾಂತತೆ ಮತ್ತು ವಿನಾಶದ ನಂತರದ ಭಗ್ನತೆ ಇವು ನನ್ನನ್ನು ಗಾಢವಾಗಿ ಕಲಕಿದ ಅಂಶಗಳು. ಪ್ರಸ್ತುತ ಈ ಕಾದಂಬರಿಯ ಕೇಂದ್ರ ಆಶಯ ಕೂಡ ಇದಾಗಿದೆ. ನನ್ನ ಭಾವಲೋಕದಲ್ಲಿ ಸದ್ಯ ಆಕಾರ ಪಡೆಯುತ್ತಿರುವ ಈ ಕಥನ ಚರಿತ್ರೆಯ ಮುಂಚಿನ ಆದಿಮ ಜಗತ್ತಿಗೂ ಮತ್ತು ಈಚೆಗಿನ

ವರ್ತಮಾನದವರೆಗೂ ವ್ಯಾಪಿಸುವ ಇಂಗಿತವನ್ನು ಮಾತ್ರ ಹೊಂದಿದೆಯೆನ್ನುವುದನ್ನು ಇಲ್ಲಿ ಓದುಗರಿಗೆ ಸೂಚ್ಯವಾಗಿ ತಿಳಿಸ ಬಯಸುತ್ತೇನೆ. ಕೆಂಡಸಂಪಿಗೆಯ ಓದುಗರು ಪ್ರೀತಿ ಅಭಿಮಾನದಿಂದ ಈ ಕಾದಂಬರಿಯನ್ನು ಸ್ವೀಕರಿಸಬೇಕೆಂದು ಕೋರುತ್ತೇನೆ. ನಾನು ಕಳೆದ ವಾರದಿಂದ ಆರಂಭಿಸಿರುವ ಈ ಕಾದಂಬರಿಗೆ ಗತಿ ಎಂಬ ಹೆಸರಿಟ್ಟಿದ್ದೇನೆ.

ಇಂತಿ

ನಿಮ್ಮವ

*ಮೊಗಳ್ಳಿ*

ಹಂಪಿಯ ಕುರಿತಾಗಿ ಲೇಖನಗಳನ್ನು ಬರೆಯ ಹೊರಟ ಮೊಗಳ್ಳಿಯವರು ಅದನ್ನು ಬರೀ ಲೇಖನ ಮಾಲೆಯನ್ನಾಗಿಸಲು ಇಷ್ಟಪಡದೆ ಚರಿತ್ರೆಯನ್ನು ವರ್ತಮಾನವನ್ನೂ ಸೃಜನಶೀಲ ನೆಲೆಯಲ್ಲಿ ಅಭಿವ್ಯಕ್ತಿಸುವ ಇಂಗಿತವನ್ನು ವ್ಯಕ್ತಪಡಿಸಿ ಅದನ್ನು ಕಾದಂಬರಿಯನ್ನಾಗಿ ಬರೆಯಲು ಆರಂಭಿಸಿದರು. ಕೆಂಡಸಂಪಿಗೆ ಹೆಸರಿನ ಅಂತರ್ಜಾಲ ಪತ್ರಿಕೆಯಲ್ಲಿ ಪ್ರತಿವಾರವೂ ಇದು ಧಾರವಾಹಿಯಾಗಿ ಪ್ರಕಟಗೊಳ್ಳುತ್ತಿದೆ. ಲೇಖನಮಾಲೆಯನ್ನು ಆರಂಭಿಸಿದ ಮುಂದಿನ ವಾರವೇ ಅವರು ತಮ್ಮ ನಿರ್ಧಾರವನ್ನು ಬದಲಿಸಿದುದು ವಿಶೇಷವಾಗಿದೆ. ಕಥನಕ್ರಮವನ್ನು ತಮ್ಮ ಮುಖ್ಯ ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿಕೊಂಡಿರುವ ಮೊಗಳ್ಳಿಯವರು ಗತಿ ಕಾದಂಬರಿಗೆ ಮುನ್ನ ಬರೆದ ಮುನ್ನುಡಿ ರೂಪದ ಬರಹ ಕುತೂಹಲಕರವಾಗಿದೆ. ಪ್ರಸ್ತುತ ಕಾದಂಬರಿಯು ಚರಿತ್ರೆಯನ್ನು ವಸ್ತುವನ್ನಾಗಿ ಹೊಂದಿದ್ದರೂ ಲೇಖಕರು ವಿವರಿಸುವಂತೆ "ಉಚ್ಛ್ರಾಯದ ಸ್ಥಿತಿಯಲ್ಲಿದ್ದ ರಾಜಧಾನಿ ಹಂಪಿ ವಿನಾಶದ ಮುನ್ನ ಅನುಭವಿಸುತ್ತಿದ್ದ ದಿವ್ಯ ಪ್ರಶಾಂತತೆ ಮತ್ತು ವಿನಾಶದ ನಂತರದ ಭಗ್ನತೆ ಇವು ನನ್ನನ್ನು ಗಾಢವಾಗಿ ಕಲಕಿದ ಅಂಶಗಳು. ಪ್ರಸ್ತುತ ಈ ಕಾದಂಬರಿಯ ಕೇಂದ್ರ ಆಶಯ ಕೂಡ ಇದಾಗಿದೆ. ನನ್ನ ಭಾವಲೋಕದಲ್ಲಿ ಸದ್ಯ ಆಕಾರ ಪಡೆಯುತ್ತಿರುವ ಈ ಕಥನ ಚರಿತ್ರೆಯ ಮುಂಚಿನ ಆದಿಮ ಜಗತ್ತಿಗೂ ಮತ್ತು ಈಚೆಗಿನ ವರ್ತಮಾನದವರೆಗೂ ವ್ಯಾಪಿಸುವ ಇಂಗಿತವನ್ನು ಮಾತ್ರ ಹೊಂದಿದೆಯೆನ್ನುವುದನ್ನು ಇಲ್ಲಿ ಓದುಗರಿಗೆ ಸೂಚ್ಯವಾಗಿ ತಿಳಿಸ ಬಯಸುತ್ತೇನೆ." ಎಂದಿರುವುದು ಮತ್ತು ಪ್ರಸ್ತುತ ಈ ಕಾದಂಬರಿಯ ಇಲ್ಲಿಯವರೆಗಿನ ಭಾಗಗಳನ್ನು ಗಮನಿಸಿ ಹೇಳುವುದಾದರೆ ಇದು ಅವರ ಮಹತ್ವಾಕಾಂಕ್ಷೆಯ ಪ್ರಯತ್ನವೆಂದೇ ಹೇಳಬೇಕಾಗುತ್ತದೆ. ಸ್ವತಃ ಲೇಖಕರೇ ವಿವರಿಸಿರುವಂತೆ ಈ ಕಥಾನಕವು ಚರಿತ್ರೆಯ ಪೂರ್ವ ಆದಿಮ ಜಗತ್ತಿಗೂ ಮತ್ತು ಆಧುನಿಕತೆಯ ವರ್ತಮಾನದವರೆಗೂ ತನ್ನ ಹರಹು ಚಾಚಿದ್ದೇ ಆದಲ್ಲಿ ಇದೊಂದು ಬೃಹತ್ ಕಾದಂಬರಿಯೇ ಆಗುವುದರಲ್ಲಿ ಸಂಶಯವಿಲ್ಲ.

ಗತಿ ಕಾದಂಬರಿಯ ವಸ್ತು ಚರಿತ್ರೆಯೇ ಆದರೂ ಇದರ ನಿರೂಪಣಾ ತಂತ್ರ ಹೊಸತೆನ್ನಿಸುತ್ತದೆ. ಇಲ್ಲಿ ಲೇಖಕರೇ ನಿರೂಪಕರಾಗಿದ್ದಾರೆ. ಬಹುಶಃ ಚಾರಿತ್ರಿಕ ವಸ್ತುವನ್ನು ಆಧಾರವಾಗುಳ್ಳ ಕನ್ನಡದ ಯಾವ ಕಥಾನಕವೂ ಈ ಬಗೆಯ ನಿರೂಪಣಾ ತಂತ್ರವನ್ನು ಒಳಗೊಂಡಿಲ್ಲವೆನಿಸುತ್ತದೆ. ವರ್ತಮಾನದಲ್ಲಿ ನಿಂತು ಚರಿತ್ರೆಯ ಕುರಿತಾದ ಕಥಾನಕವನ್ನು ಕಟ್ಟುವುದೆಂದರೆ ಆಧುನಿಕತೆಯ ನೆಲೆಯಲ್ಲಿ ಚರಿತ್ರೆಯನ್ನು ಅರ್ಥೈಸುವುದೆಂದಾಗುತ್ತದೆ.

## ಟಿಪ್ಪಣಿಗಳು

೧. ಅಗ್ನಿಪತ್ರಿಕೆ, ಶ್ರೀಧರ, ಅವರ ಕಥನಗಳ ಮಾಂತ್ರಿಕ ಚಾಪೆಯ ಮೇಲೆ, ಜೂನ್ ೨, ೨೦೦೫

೨. ರಾಜೇಂದ್ರ ಚೆನ್ನಿ, ಭೂಮಿ ಕಥಾಸಂಕಲನಕ್ಕೆ ಬರೆದ ಮುನ್ನುಡಿ

೩. ಪ್ರಜಾವಾಣಿ ಪತ್ರಿಕೆ, ಡಾ. ಡಿ. ಆರ್. ತಿಪ್ಪೇಸ್ವಾಮಿ, ೧೫ನೆ ಮೇ, ೨೦೦೫

೪. ಅದೇ.,

೫. ಮಣ್ಣು ಕಥಾಸಂಕಲನದ ಬೆನ್ನುಡಿ

ಅಧ್ಯಾಯ ಏಳು

# ಮೊಗಳ್ಳಿ ಕಥನ ಇದುವರೆಗಿನ ವಿಮರ್ಶೆಗಳ ಅವಲೋಕನ

## ಅವರ ಕಥನಗಳ ಮಾಂತ್ರಿಕ ಚಾಪೆಯ ಮೇಲೆ

**ಅಗ್ನಿ ಶ್ರೀಧರ್**

ಮೊದಲ ಸಂಕಲನ ಬುಗುರಿ ಮೂಲಕ ಕನ್ನಡ ಕಥನ ಸಂದರ್ಭಕ್ಕೆ ಹೊಸ ಅನುಭವಲೋಕ ಮತ್ತು ಭಾಷಾ ವಿನ್ಯಾಸವನ್ನು ಸೇರಿಸಿದ ಮೊಗಳ್ಳಿ ಮತ್ತೆ ಹತ್ತು ಕಥೆಗಳನ್ನು ಇಲ್ಲಿ ಹೊಂದಿಸಿಕೊಟ್ಟಿದ್ದಾರೆ. ಆತ್ಮಕಥನ ಮಾದರಿಯ ಈ ರಚನೆಗಳು ಸಂವೇದಿಸುವ, ಸಂವಾದಿಸುವ ರೀತಿಯಲ್ಲಿ, ಕತೆಗಳ ಲೋಕ ಓದುಗನ ಲೋಕವನ್ನು ಪ್ರವೇಶಿಸುವ ಕ್ರಮದಲ್ಲಿ ಗುರುತಾಗುವ ವಿಭಿನ್ನತೆಯ ಕಾರಣಕ್ಕೆ ಇಷ್ಟವಾಗುವ ಕತೆಗಳಿವು.

ಒಂದು ಕಾಲಗರ್ಭದ ಸತ್ಯಗಳನ್ನು ಹಲವು ಸ್ಥಿತ್ಯಂತರಗಳ ನಂತರದ ಪ್ರೀತಿ, ಹಂಬಲ, ತಲ್ಲಣ, ದುಃಖ ಮತ್ತು ಮೌನದಂತಹ ಬಯಲ ಬೆಳಕಿನಲ್ಲಿ ಅಂತಃಕರಣದ ಸ್ನಿಗ್ಧತೆಯಲ್ಲಿ ನೆನಪಿಸಿಕೊಳ್ಳುವ ಪರಿ ಅದೇ ಕಾರಣಕ್ಕೇ ಜೀವಂತವೆನ್ನಿಸುವಂತಹದು. ಭಾವನಾತ್ಮಕ ಸಮೀಪವನ್ನು ವೈಚಾರಿಕ ಪರಿಭಾಷೆಗಳ ಧರಿಸಿದ ಮನಸ್ಥಿತಿಯಲ್ಲೂ ಸ್ಪರ್ಶಿಸಿ ನೋಡುವ, ಆ ಮೂಲಕ ಸಂಬಂಧದ ಮೌಲ್ಯವನ್ನು ಗೌರವಿಸುವ ಗುಣವೊಂದು ಇಲ್ಲಿ ಹೊಳೆಯುತ್ತದೆ.

ನಾನಿಲ್ಲಿ ನನ್ನ ಹಳ್ಳಿಯ ಲೋಕದ ಜೊತೆಯಲ್ಲಿ ಮಾತನಾಡಿಕೊಳ್ಳುತ್ತಾ ಅವರ ಸಂಗತಿಗಳ ಹಾಡಿಕೊಂಡಿದ್ದೇನೆ. ಅವರ ಕಥನಗಳ ಮಾಂತ್ರಿಕ ಚಾಪೆಯ ಮೇಲೆ ಮಲಗಿ ಕನಸು ಕಟ್ಟಿಕೊಳ್ಳುತ್ತಾ ಬೆಳದ ನನಗೆ ಈಗ ಈ ಶತಮಾನ ಅಂಚಿನಲ್ಲಿ ನಿಂತು ಅವರ ನೆನೆದುಕೊಂಡರೆ ದಿಗ್‌ಭ್ರಮೆ ಉಂಟಾಗುತ್ತದೆ. ಇಲ್ಲಿನ ಕತೆಗಳ ಅನೇಕ ಪಾತ್ರಗಳು ತಮ್ಮ ಆಯಸ್ಸು ಮುಗಿಸಿ ಮಣ್ಣಾಗಿ ಹೋಗಿವೆ. ನನ್ನ ಮನಸ್ಸಿನಲ್ಲಿ ಅವರು ಕಾಡಿದ ಪರಿಯಲ್ಲೇ ಅವರ ಬಗ್ಗೆ ಇಲ್ಲಿ ಬರೆದುಕೊಂಡಿದ್ದೇನೆ. ಅವರ ಬಾಳನ್ನು ಕಥನ ಕಲೆಯ ತಂತ್ರ ಮಂತ್ರಗಳಿಗೆ ಹೊಂದಿಸದೆ ನನ್ನ ಪಾಡಿಗೆ ನಾನು ನನಗೇ ನಿರೂಪಿಸಿಕೊಂಡಂತೆ ಹೇಳಿಕೊಂಡಿದ್ದೇನೆ ಎಂದಿದ್ದಾರೆ ಮೊಗಳ್ಳಿ.

ತನ್ನ ಬಾಲ್ಯ ಸಂದರ್ಭದ ವೈವಿಧ್ಯಮಯ ಲೋಕಕ್ಕೆ ಕನ್ನಡಿಯೊಡ್ಡುವ ಕೆಲಸದ ಮೂಲಕ ಈ ಕತೆಗಾರ ಹುಡುಕಹೊರಟ ಸಂಬಂಧಗಳ ಅನನ್ಯತೆಯೆಂಬ ಸಂಗತಿ ಹೀಗೆ ಚೌಕಟ್ಟಿನಾಚೆಯ ವಿಸ್ತಾರವನ್ನಪೇಕ್ಷಿಸುವ ಶ್ರೀಮಂತಿಕೆಯುಳ್ಳದ್ದಾಗುತ್ತದೆ. ಚೌಕಟ್ಟು ಕಳಚಿಟ್ಟು ನೋಡಿಕೊಳ್ಳುವಲ್ಲೇ ಸಂಬಂಧದ ನಿಜರೂಪ ಕಣ್ಣಿಗೂ, ಮನಕ್ಕೂ ಸಿಗುತ್ತದೆ.

ಇಲ್ಲಿ ಈ ಸಂಕಲನದ ಹೆಸರಿನದೇ ಕತೆ, ಕಾಳಿ, ಅವ್ವ ಈ ಕತೆಗಳು ಅವುಗಳೊಳಗೆ ಪಾತ್ರವಾಗಿ ಮೂಡಿದ ಜೀವಗಳನ್ನು ಆಪ್ತವಾಗಿ ಧ್ಯಾನಿಸುವ ವಿಲಕ್ಷಣ ರೀತಿಯಲ್ಲಿ ಕಳೆದುಹೋಗಿಬಿಡುವ ಇಂತಹ ಆಪ್ತತೆಯ ದುಃಖದಲ್ಲಿ ಮಗ್ನವಾಗುವ ಮೈಕಟ್ಟಿನವು.

ಕಾಳಗದ ಹುಂಜ, ಬಾಡೂಟದಂತಹ ಕತೆಗಳು ಒಳಗೊಂಡಿರುವ ವಿವರಗಳಲ್ಲಿ ಜಿದ್ದು, ಸಂಕಟ, ಯಾತನೆಗಳ ಜಗತ್ತಿನಲ್ಲಿಯೂ ಯಾವುದೋ ಸಾಂತ್ವನಕ್ಕೆ ಸಂತೃಪ್ತಿಗೆ ನಿರೀಕ್ಷಿಸುವ ಮನೋವೃತ್ತಿ ಪ್ರಕಟವಾಗಿದೆ. ಈ ವಿವರಗಳ ಮೂಲಕವೇ ಸಂಕೀರ್ಣತೆಯೊಂದಿಗೆ ಏರ್ಪಡುವ ಜೀವನದ ಹಲವು ಆಯಾಮದ ಸಂಘರ್ಷಗಳ ಮಧ್ಯೆ ತನ್ನನ್ನು ತಾನು ತೋರಿಸಿಕೊಳ್ಳುತ್ತ ಪರಿಶೀಲಿಸಲ್ಪಡುತ್ತ ನಿಲ್ಲುತ್ತದೆ.

ಈಗಾಗಲೇ ಮೊದಲ ಸಂಕಲನಕ್ಕೆ ಕರ್ಣಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿರುವ ಮೊಗಳ್ಳಿ ಅಪ್ಪಟ ಪ್ರತಿಭೆಯಿಂದಲೇ ಗಮನ ಸೆಳೆದ ಕತೆಗಾರ. ಮೊಗಳ್ಳಿ ಕತೆಗಳು ತರುವ ಲೋಕ ಮತ್ತು ಅವರ ಕತೆಯೊಂದು ಕತೆಯಾಗಿ ಬೆಳೆವ ಪರಿ ಕೂಡ ಕುತೂಹಲಕರವಾದದ್ದು ಅನ್ನುವ ಕಾರಣಕ್ಕೂ ಚರ್ಚೆಯನ್ನು ಅಪೇಕ್ಷಿಸುವ ಕತೆಗಳನ್ನು ಈ ಸಂಗ್ರಹ ಒಳಗೊಂಡಿದೆ.[೧]

**ಸ್ವಪ್ನ ಚಿತ್ರಶಾಲೆ**

ಹಗಲಿನ ಗೌಪ್ಯತೆಯೆಲ್ಲವೂ ರಾತ್ರಿಯ ನಿದ್ದೆಯಲ್ಲಿ ಬೆತ್ತಲಾಗುತ್ತಿತ್ತು ಎನ್ನುವ ಲೇಖಕರು ಬೆತ್ತಲೆ ಭಾವನೆಗಳನ್ನೇ ಈ ಕಾದಂಬರಿಯ ಪ್ರತಿ ಪುಟದಲ್ಲೂ ದಾಖಲಿಸಿದ್ದಾರೆ. ಕನಸಿನ ಕನವರಿಕೆಗಳನ್ನು ನೇರವಾಗಿ ಹಾಳೆಗೆ ವರ್ಗಾಯಿಸುವುದನ್ನೇ ಮುಖ್ಯ ತಂತ್ರವನ್ನಾಗಿಸಿ ಕೃತಿ ಹೆಣೆದು ಮಾತಿನ ಮೋಡಿಯಲ್ಲಿ ಮಾಯಾಲೋಕಕ್ಕೆ ಸವಾರಿ ಕರೆದೊಯ್ಯುತ್ತಾರೆ.

ಶ್ರೀಮಾನ್ ದ್ಯಾವಪ್ಪನವರು ತಮ್ಮ ಮನೆತನಕ್ಕೆ ಬಿಳಿಯ ದೊರೆಯಿಂದ ಬಂದಿದ್ದ ಗಿಲೀಟಿನ ಕಿರೀಟದ ಬಗ್ಗೆ ಎಲ್ಲರ ಬಳಿ ಕೊಚ್ಚಿಕೊಳ್ಳುತ್ತಿರುತ್ತಾರೆ. ಎಂತೆಂಥ 'ವ್ಯಾವಾರ' ಮಾಡಿದರೂ ಸತ್ಯಹರಿಶ್ಚಂದ್ರನ ನಾಟಕದಲ್ಲಿ ಹರಿಶ್ಚಂದ್ರನ ನಾಟಕದಲ್ಲಿ ಹರಿಶ್ಚಂದ್ರನ ಪಾತ್ರ ಹಾಕುವ ಅವರಿಗೆ ಕಿರೀಟದ ಆಧಾರದಿಂದಲೇ ಸುತ್ತೇಳು ಊರುಗಳನ್ನು ಆಳುವ ಸಾಮರ್ಥ್ಯ ಒದಗಿದೆ ಎಂದು ಜನರು ಭಾವಿಸಿಕೊಂಡಿರುತ್ತಾರೆ. ತಮ್ಮ ಮಗ ಶಿವಸ್ವಾಮಿಗೆ ಸಾಹುಕಾರ್ ತಿಮ್ಮಯ್ಯನವರ ಏಕಮೇವ ಮೊಮ್ಮಗಳು ವೇದಾವತಿಯನ್ನು ತಂದುಕೊಂಡು ಆಸ್ತಿಯನ್ನು ಮತ್ತಷ್ಟು ವಿಸ್ತರಿಸಿಕೊಳ್ಳುತ್ತಾರೆ. ಶಿವಸ್ವಾಮಿಯು ತನ್ನ ಮನೆತನದ ಪಾಪಗಳ ದುರ್ವಾಸನೆಯೇ ಮೂರ್ತಿವೆತ್ತಂತೆ ವೇದಾವತಿಗೆ ಕಾಣುತ್ತಾನೆ. ಅವಳ ಸುಕೋಮಲ ಭಾವನೆಗಳ ವೃತ್ತದ ಆಚೆಯೇ ಉಳಿದು ಬಿಡುವ ಶಿವಸ್ವಾಮಿ ಚೆಂದುಳ್ಳಿ ಚೆಲುವೆಯಂಥ ಮಡದಿಯಿಂದ ಯಾವ ಸುಖವೂ ಸಿಗದಲ್ಲ ಎಂದು ಕೊರಗಿ ಅಡ್ಡಹಾದಿ ಹಿಡಿಯುತ್ತಾನೆ. ವೇದಾವತಿಗೆ ಜೀತದಾಳು ತನ್ನ ತಮ್ಮನಂತೆಯೂ, ತನ್ನೆಲ್ಲಾ ಭಾವನೆಗಳನ್ನು ಅರ್ಥೈಸಿಕೊಳ್ಳಬಲ್ಲ ಸಮರ್ಥ ಜತೆಗಾರನಂತೆಯೂ ಕಾಣಿಸುತ್ತಾನೆ. ಒಮ್ಮೆ ಜೀತದಾಳಿನೊಡನೆ ನದಿ ದಂಡೆಯಲ್ಲಿ ಹರಟುತ್ತಿದ್ದಾಗ ಕ್ಷುದ್ರ ಶಿವಸ್ವಾಮಿ ಇಬ್ಬರನ್ನೂ ಕೊಲ್ಲಲು ಯತ್ನಿಸುತ್ತಾನೆ. ಅವನ ಯತ್ನ ಸಫಲವಾಯಿತೇ...? ಅದು ಸಸ್ಪೆನ್ಸ್.

ಕಾದಂಬರಿಯ ಅಂತ್ಯದಲ್ಲಿ ಮಾಯದ ಮಳೆ ಬರುತ್ತದೆ. ಅದು ಬಹುಪಾಲು ಕಿರುಗೂರಿನ ಗಯ್ಯಾಳಿಗಳು ಕತೆಯ ಬಿರುಗಾಳಿಯನ್ನು ಹೋಲುತ್ತದೆ. ಅಲ್ಲಿ ಸೋಮಾರಿ ಗಂಡಸರಿಗೆ ಬುದ್ಧಿ ಕಲಿಸಿದ ಭಾರೀ ಮಳೆ ಇಲ್ಲಿ ಉಳ್ಳವರ ಪೊಳ್ಳುತನಕ್ಕೆ ಕೊಡಲಿ ಪೆಟ್ಟು ನೀಡುತ್ತದೆ.

ಕಾದಂಬರಿಯ ಪ್ರಮುಖ ಪಾತ್ರಗಳಲ್ಲಿ ಒಂದೆನಿಸಿದ ಬಡಕಲು ನಾಯಿ ತನ್ನ ಗೆಳೆಯ ಟಗರಿಗೆ ಆಸೆಯಿಂದ ಬಂದ ದುಃಖವನ್ನು ಗೆದ್ದುಬಿಡಬಹುದು. ಆದರೆ ಆಸೆಯೇ ಇಲ್ಲದಿದ್ದರೂ ಹುಟ್ಟಿನಿಂದಲೇ ಬರುವ ದುಃಖವನ್ನು ಮೀರಲು ನಮ್ಮಂತಹ ಅನಾಥ ಪ್ರಾಣಿಗಳಿಗೆ ಸಾಧ್ಯವೇ ಮರುಳೇ ಸುಮ್ಮನೆ ದುಃಖವನ್ನು ಅರಗಿಸಿಕೊಂಡು ಬಿಡು. ಅರಗಿದ ದುಃಖಕ್ಕೆ ಭೂಮಿಯನ್ನೇ ಹೊತ್ತು ಬಿಡುವ ಶಕ್ತಿಯಿದೆ ಎಂದು ಹೇಳುತ್ತದೆ. ಮುಂದೆ ಟಗರು ಸತ್ತು ಹೋದಾಗ ಅದೇ ನಾಯಿ ಇಂಥವೇ ಬುದ್ಧಿ ಮಾತುಗಳನ್ನು ಜೀತದೈದನಿಗೂ ಹೇಳುತ್ತದೆ. ದಲಿತ ಜಗತ್ತಿನ ನವವ್ಯಾಖ್ಯಾನದಂತೆ ಕಂಡುಬರುವ ಈ ಸಾಲುಗಳು ಕಾದಂಬರಿ ಚೌಕಟ್ಟಿನಿಂದ ಹೊರಗಿಟ್ಟು ನೋಡಿದರೂ ತಮ್ಮದೇ ಆದ ಸ್ಥಾನ ಪಡೆಯುತ್ತವೆ.

ದುಃಖವನ್ನು ಅದರ ಆತ್ಯಂತಿಕ ರಮ್ಯದಲ್ಲಿ ಪರಿಭಾವಿಸಿರುವ ಲೇಖಕ ಬುದ್ಧನ ಆಧ್ಯಾತ್ಮಿಕ ನೆಲೆಗಳನ್ನು ಎದುರುಗೊಳ್ಳುವ ಬಗೆಯಲ್ಲಿ ಹೊಸತನವಿದೆ. ಕನಸೇ ಪರಮ ವಾಸ್ತವ ಎಂದು ಪ್ರತಿ ಪುಟದಲ್ಲೂ ಸಾರಿ ಹೇಳುತಾ ಕಾಲದ ಶಕ್ತಿಗೆ ಬಗ್ಗದ್ದೂ ಯಾವುದೂ ಇಲ್ಲ ಎಂದು ಸಾರಿ ಹೇಳುತ್ತಾರೆ.

ಕಾರಂತರ ನಂತರ ಕನಸುಗಳನ್ನು ಗಂಭೀರವಾಗಿ ಕಾದಂಬರಿ ಚೌಕಟ್ಟಿನಲ್ಲಿ ಕೂಡಿಸುವ ವಿಶಿಷ್ಟ ಪ್ರಯತ್ನ ಇಲ್ಲಿ ನಡೆದಿದೆ.[೨]

**ಮೊಗಳ್ಳಿಯವರ ಫ್ಯಾಂಟಸಿ ಮತ್ತು ಮಾಂತ್ರಿಕತೆಯ ತೊಟ್ಟಿಲು**

ಯಾವುದೆ ಉತ್ತಮ ಕಲಾಕೃತಿ ನಮಗೆ ವಾಸ್ತವತೆಯ ವಿವಿಧ ಸ್ತರಗಳ, ಮಜಲುಗಳ ದರ್ಶನವನ್ನು ಮಾಡಿಸುತ್ತದೆಂದು ನನ್ನ ದೃಢ ನಂಬಿಕೆ.

ಮೊಗಳ್ಳಿ ಗಣೇಶರ ಪ್ರಥಮ ಕಾದಂಬರಿ ತೊಟ್ಟಿಲು ಅಂತಹ ಹಲವಾರು ಸ್ತರಗಳಿಗೆ ನಮ್ಮನ್ನು ಕೊಂಡೊಯ್ಯುತ್ತದೆ. ದಿಬ್ಬದ ಮೇಲಿದ್ದ, ನಿತ್ಯವೂ ಹಬ್ಬದಂತೆ ನಡೆಯುತ್ತಿದ್ದ, ದೊಡ್ಡ ಮನೆಯ, ದೊಡ್ಡ ಮನೆತನ ಛಿದ್ರವಾಗುತ್ತಾ ಹೋಗುವ ರೀತಿಯನ್ನು ನಮ್ಮ ಮುಂದೆ ದಾಖಲಿಸುತ್ತಾ ಹೋಗುವ ದಾರಿ ಯಾವ ರೀತಿ ಕವಲೊಡೆಯುತ್ತದೆಯೆಂದರೆ ಅನೇಕ ಬಾರಿ ತೀರ ವಿರುದ್ಧವೆನಿಸುವ ದಿಕ್ಕುಗಳಲ್ಲಿ ಸಾಗತೊಡಗಿ ನಂತರ ಮತ್ತೆ ಬೆಸೆದುಕೊಳ್ಳುತ್ತಾ ಹೋಗುತ್ತದೆ.

ನಮ್ಮ ಕಣ್ಣೆದುರಿಗಿನ ವಾಸ್ತವವನ್ನು ಬಿಂಬಿಸುವ ರೀತಿಯಲ್ಲಿ ಆರಂಭವಾಗುವ ಕಾದಂಬರಿ, ಎರಡನೆ ಪ್ಯಾರದಿಂದಲೆ magical realism ಧುಮುಕಿ ನಂತರ ಅದರೆಲ್ಲಾ ಸಾಧ್ಯತೆಗಳನ್ನು ಅನ್ವೇಷಿಸುತ್ತಾ ಸಾಗಿ ಮತ್ತೆ ಮಾಮೂಲಿಗೆ ಬಂತೇನೊ ಎಂದುಕೊಳ್ಳುವಷ್ಟರಲ್ಲಿ ಫ್ಯಾಂಟಸಿಯ ಲೋಕಕ್ಕೆ ನಮ್ಮನ್ನು ಸೆಳೆದೊಯ್ಯುತ್ತದೆ.

ಕಟುವಾಸ್ತವದಲ್ಲೂ ಅಡಗಿರುವ ಮಾಂತ್ರಿಕತೆಯ ಮೋಡಿಯನ್ನು ನಮ್ಮ ಗಮನಕ್ಕೆ ತಂದವರು ಲ್ಯಾಟೀನ್ ಅಮೇರಿಕನ್ ಬರಹಗಾರರು ಎರವಲು ಬಂದ ಯಂತ್ರ ಸಂಸ್ಕೃತಿಯ ವಿರುದ್ಧ ದೇಸೀ ಸಂಸ್ಕೃತಿಯ ಪ್ರಾಬಲ್ಯವನ್ನು

ಮತ್ತು ಶ್ರೇಷ್ಠತೆಯನ್ನು ಪ್ರತಿಪಾದಿಸಲು ಆ ಬರಹಗಾರರು ಬಳಸಿಕೊಂಡ ಶೈಲಿ ಅದು.

ಯಾವುದೆ ಒಂದು ಸಿದ್ಧ ವಿಧಾನದ ಮೂಲಕ ಖಚಿತವಾದ, ಅರ್ಥಪೂರ್ಣವಾದ ಅಭಿವ್ಯಕ್ತಿ ಅಸಾಧ್ಯವೆಂದು ತೀರ್ಮಾನಿಸಿದ ಆ ಬರಹಗಾರರು ತಮ್ಮ ಸಂಸ್ಕೃತಿಯಲ್ಲಿರುವ ಎಲ್ಲ ವಿಧಾನಗಳನ್ನು ತಮ್ಮ ಅಭಿವ್ಯಕ್ತಿ ಸಾಮಾಗ್ರಿಯನ್ನಾಗಿ ಬಳಸಿಕೊಳ್ಳತೊಡಗಿದರು.

ಅತ್ಯಂತ ಸಮರ್ಪಕವಾಗಿ ಅದನ್ನು ಬಳಸಿಕೊಂಡವರು ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೇಸ್.

ನಂತರದಲ್ಲಿ ಅದನ್ನು ಇಟಲಿಯ ಇಟಾಲೊ ಕ್ಯಾಲ್ವಿನೊ, ಝೆಕೊಸ್ಲೊವಾಕಿಯಾದ ಮಿಲನ್ ಕುಂದೇರ ಮತ್ತು ಇಂಗ್ಲಿಷಿನಲ್ಲಿ ಸಲ್ಮಾನ್ ರಷ್ದಿ ಬಳಸತೊಡಗಿದರು.

ನಮ್ಮ ಭಾಷೆಯಲ್ಲಿ ಅದನ್ನು ವ್ಯಾಪಕವಾಗಿ ಬಳಸಿದ ಯಾವ ಕೃತಿಯೂ ನನ್ನ ಓದಿನ ಮಿತಿಯಲ್ಲಿ ನನಗೆ ಕಂಡಿಲ್ಲ.

ದೇವನೂರರ ಕುಸುಮಬಾಲೆಯಲ್ಲಿ ಅದರ ತೆಳುವಾದ ಛಾಯೆ ಕಂಡುಬಂದರೂ; ಒಟ್ಟಾರೆ ಹಂದರದಲ್ಲಿ ನಮ್ಮ ಕಣ್ಣೆದುರಿಗಿನ ವಾಸ್ತವತೆ ಕಂಗೊಳಿಸುತ್ತದೆ.

ಆದರೆ ಮೊಗಳ್ಳಿಯವರಲ್ಲಿ ಅದು ಲ್ಯಾಟಿನ್ ಅಮೆರಿಕನ್ ಬರಹಗಾರರನ್ನು ಬೆಚ್ಚಿಸುವಷ್ಟು ಆಳವಾಗಿದೆ. ಅದು ಏಕಕಾಲದಲ್ಲಿ ತೊಟ್ಟಿಲು ಕೃತಿಯ ವಿಶಿಷ್ಟತೆ ಹಾಗೂ ವೈಫಲ್ಯ ಎರಡೂ ಆಗಿದೆ.

ಸದಾ ಧ್ವನಿ ತರಂಗಗಳ ಅನ್ವೇಷಣೆಎಯಲ್ಲೆ ಜೀವಿಸುವ ರೇಡಿಯೊ ಚಿಕ್ಕಪ್ಪ; ದೊಡ್ಡ ಮನೆಯ ಆ ದೊಡ್ಡ ತೊಟ್ಟಿಲು; ಗಂಡನನ್ನು ಸರಿಪಡಿಸಾಲಗದಿದ್ದರೂ ಫ್ಯಾಷನ್ ಜಗತ್ತನ್ನು ಗೆಲ್ಲುವ ವೆಂಕಟಲಕ್ಷ್ಮಿ; ಮಾತೇ ಆಡದ ಹಾ ಓ ಅಯ್ಯೋ; ಗೂಬೆಯನ್ನು ಕೊಲ್ಲಲು ಬೆತ್ತಲೆಯಾಗಿ ಕಾಡಿನ ಅಂಚಿಗೆ ಹೋಗುವ ಹಿರಿಯಜ್ಜಿ; ಕುದುರೆ ಸವಾರಿ, ಬಂದೂಕಿನ ಪ್ರಯೋಗದಲ್ಲಿ ನಿಪುಣನಾಗಿರುವ ದೊಡ್ಡಪ್ಪ; ಇಡೀ ವಿಶ್ವವೆಲ್ಲವನ್ನೂ ನಲಿಸುವಂತೆ ಹಾಡುವ, ಯಾವ ವಿವರಗಳೂ ದೊರೆಯದ ಮನೆಗೆಲಸದ ಮೂಕಿ; ಕಿನ್ನರ ಶಿಲೆಗಳ ನಡುವಿನ ಜಲಪಾತಕ್ಕೆ ಧುಮುಕುವ ಅಪ್ಸರೆ; ಅವಳನ್ನು ಮೋಹಿಸುವ ಪೂರ್ವಿಕ; ಸೂಕ್ಷ್ಮ ಮನಸ್ಸಿನ, ಭಗ್ನ ಹೃದಯದ ನಿರೂಪಕನ ಸಾಹಸ, ದುಸ್ಸಾಹಸ, ಪ್ರಣಯ ಮತ್ತು ವೇದನೆಗಳು - ಎಲ್ಲವನ್ನೂ ಎರಕಹೊಯ್ದು, ನಮ್ಮನ್ನು ಬೆಚ್ಚಿಸುವಂತೆ ಬರೆಸಿಟ್ಟಿದ್ದಾರೆ ಮೊಗಳ್ಳಿ.

ಮೊಗಳ್ಳಿಯವರು ಭಾಷೆಯನ್ನು ಬಳಸಿಕೊಂಡಿರುವ ಪರಿ ನಮ್ಮನ್ನು ಚಕಿತಗೊಳಿಸುತ್ತದೆ. ಶಿಲ್ಪಿಗಳು ಬೆಟ್ಟವನ್ನು ಕಡಿದು ಪ್ರತಿಮೆಯಾಗಿಸುವ ತನ್ಮಯತೆಯಲ್ಲಿ ಪದಗಳನ್ನು ಜೋಡಿಸುತ್ತಾ ಪ್ರತಿಮೆಗಳನ್ನು ಕಟ್ಟುತ್ತಾರೆ ಮೊಗಳ್ಳಿ.

ಕಾಲದ ಬಗ್ಗೆ ಅವರ ಹಲವು ವಾಕ್ಯಗಳು

ಕಾಲ ನಮ್ಮನ್ನೆಲ್ಲ ಜಗಿಯುತ್ತಿದ್ದಂತೆ ನಮ್ಮ ನೆನ್ನೆಗಳೇ ನಮಗೆ ಮರೆಯಾಗಿ ಹೋಗಿದ್ದವು. ಪು. ೧.

ಕಾಲದ ಭರ್ಜಿ ಮೊನೆ ಮೇಲೆ ಮನವ ಕೂರಿಸಿ ನೆನ್ನೆಯನ್ನು ಇವತ್ತಿನ ಬದುಕಲ್ಲಿ ನೆನೆಯುತ್ತಾ ಈ ಕ್ಷಣದ ನಾಳೆಯ ನಿರೀಕ್ಷೆಯ ಮರೀಚಿಕೆಯಲ್ಲಿ ತೇಲಿಸುತ್ತಾ.... ಪು. ೯೧

.... ಗಾಳಿಯಲ್ಲೇ ಎಚ್ಚರಿಸಿದಂತೆ ಕೇಳಿಸಿ, ನನ್ನ ಕೈಗೆ ಸಿಗದ ಈ ಕಾಲವನ್ನು ಕಣ್ಣಿಗೆ ಕಾಣದ ಈ ಕಾಲವನ್ನು

ನನ್ನ ಯಾವ ಇಂದ್ರಿಯಗಳ ಹಿಡಿತಕ್ಕೂ ಸಾಧ್ಯವಾಗದ ಈ ಕಾಲವನ್ನು ಅದರ ಹೆಬ್ಬಾವಿನ ಕ್ರೂರ ನುಲಿತವನ್ನು...
ಪು. ೯೬, ೯೭

ಪ್ರತಿ ಪುಟದಲ್ಲೂ ಭಾಷೆಯ ಮೇಲಿನ ಮೊಗಳ್ಳಿಯವರ ಹಿಡಿತ ನಮ್ಮನ್ನು ಅಕ್ಷರಷಃ ದಂಗುಬಡಿಸುತ್ತದೆ. ಮೊಗಳ್ಳಿಯವರು ಪ್ರಸ್ತುತ ನಮ್ಮ ನಡುವಿನ ಅತೀ ಬಲಿಷ್ಠ ಬರಹಗಾರರೆನ್ನುವುದನ್ನು ಸಾಬೀತು ಪಡಿಸುತ್ತದೆ. ತಮ್ಮ ಪ್ರತಿಭೆಯನ್ನು ಶಿಸ್ತಿನಿಂದ ನಿರ್ವಹಿಸಿಕೊಂಡು ನಡೆಯತೊಡಗಿದರೆ ದೇವನೂರರ ಉತ್ತರಾಧಿಕಾರಿಯಾಗಬಹುದೇನೊ ಎನ್ನುವಂತಹ ಭರವಸೆಯನ್ನು ಮೂಡಿಸುತ್ತಾರೆ.

ಭಾಷೆಯನ್ನು ಅವರು ಅನನ್ಯತೆಯಿಂದ ಬಳಸುವ ರೀತಿ ಅವರ ಸಣ್ಣ ಕಥೆಗಳಲ್ಲೇ ನಮಗೆ ಮನವರಿಕೆಯಾಗಿದ್ದು; ಕಾದಂಬರಿಯ ಬೃಹತ್ ವಿಶ್ವದಲ್ಲೂ ತಮ್ಮ ಹಿಡಿತ ಸಡಿಲವಾಗಲು ಎಲ್ಲೂ ಅವಕಾಶ ನೀಡಿಲ್ಲ.

ಮೊಗಳ್ಳಿಯವರಿಗೆ ಬದುಕೆಂದರೆ ಕೇವಲ ದೈನಂದಿನ ಬದುಕಲ್ಲ. ನಮ್ಮ ಮನದಾಳದಲ್ಲಿ ಹುದುಗಿರುವ ಸುಪ್ತ ಚಿತ್ರಗಳೂ ಸಹ ಅವರಿಗೆ ಬದುಕೆ. ಅವು ಕೇವಲ ಸಂಕೇತಗಳಲ್ಲ; ಜೀವಂತ ವಾಸ್ತವಗಳು.

ತೊಟ್ಟಿಲು ಕಾದಂಬರಿಯಲ್ಲಿ ಬೇತಾಳವೂ ಜೀವಂತವಾಗಿ; ಶವಗಳೂ ಗೋಗರೆಯುತ್ತವೆ.

ಕೃಷ್ಣರಾಜ ಒಡೆಯರ್ ಮತ್ತು ಅಂಬೇಡ್ಕರ್‌ರವರೂ ಗೋಚರಿಸುತ್ತಾರೆ.

ವರ್ತಮಾನದ ಈ ಕ್ಷಣದ ಬದುಕಿನ ಜೊತೆಗೆ ಆಧ್ಯಾತ್ಮಿಕ ಸತ್ಯಗಳೂ ತಳುಕು ಹಾಕಿಕೊಳ್ಳುತ್ತವೆ.

ಎಂಡ, ಕೊಲೆ, ಭೂಗತ ಕ್ರಾಂತಿಕಾರಿಗಳು ಮತ್ತು ಪೊಲೀಸರು ಸಹ ಇದ್ದಾರೆ.

ಮೌಢ್ಯವೆನಿಸುವಂತಹ ಸಂಪ್ರದಾಯಗಳ ಜೊತೆಗೆ ಆಧುನಿಕ ವಿಶ್ವ ಪರಸ್ಪರ ಪ್ರತ್ಯೇಕಿಸಲಾಗದಷ್ಟು ಕರಗಿಹೋಗಿದೆ.

ಇತರ ಯಾವ ಸಣ್ಣ ಕಾದಂಬರಿಗಳಲ್ಲೂ ದೊರಕದ ವಿವರಗಳು ಈ ಕಾದಂಬರಿಯಲ್ಲಿ ಎಷ್ಟು ದಟ್ಟವಾಗಿ ಹಬ್ಬಿವೆಯೆಂದರೆ, ಇದೊಂದು ಬೃಹತ್ ಕಾದಂಬರಿಯೇನೊ ಎನ್ನುವ ಭ್ರಮೆ ಹುಟ್ಟಿಸುತ್ತದೆ.

ಆದರೆ ಮೊಗಳ್ಳಿಯವರ ತೊಟ್ಟಿಲು ಕಾದಂಬರಿಯಲ್ಲಿ ಹಲವಾರು ಮಜಲುಗಳ ಮಿಶ್ರಣ ಸಮರ್ಪಕ ಮಿಶ್ರಣವಾಗಿ ಬೆರೆತು ಒದು ಅರ್ಥಪೂರ್ಣ ವಿಶ್ವವನ್ನು ಸೃಷ್ಟಿಸಿದೆ ತುಣುಕು ತುಣುಕು ಸರೋವರಗಳನ್ನು ಮಾತ್ರ ನಿರ್ಮಿಸಿದೆ.

ಆದರೂ ಆ ಸರೋವರಗಳು ಎಷ್ಟು ಜೀವಂತವಾಗಿ ನಮ್ಮನ್ನು ಸೆಳೆಯುತ್ತವೆಂದರೆ; 'ಫ್ಯಾಂಟಸಿ' ಯನ್ನು ಮೊಗಳ್ಳಿಯವರು ಬಳಸಬಾರದಿತ್ತೆನ್ನುವ ಸಿಟ್ಟನ್ನು ಹುಟ್ಟಿಸುತ್ತವೆ. ಮೊಗಳ್ಳಿಯವರ ವಾಸ್ತವದ ಚಿತ್ರಣ ಅವರ ಫ್ಯಾಂಟಸಿಗಿಂತಲೂ ಹೆಚ್ಚು ತೀವ್ರವಾಗಿ ನಮ್ಮನ್ನು ಕಾಡುತ್ತದೆ. ಬೆತಾಳ, ಶವಗಳು, ಗಂಗೆ ಮುಂತಾದವುಗಳು ರೇಡಿಯೊ ಚಿಕ್ಕಪ್ಪ ಮತ್ತು ಹಾ ಓ ಅಯ್ಯೋರವರ ನೈಜ ವ್ಯಕ್ತಿತ್ವದೆ ಎದುರು ಪೇಲವವಾಗಿ ಜೀವರಹಿತವಾಗಿ ಕಾಣುತ್ತವೆ. ಕಾದಂಬರಿಯನ್ನು ಓದಿದ ಯಾರೂ ಆ ಎರಡು ಪಾತ್ರಗಳನ್ನು ಎಂದೂ ಮರೆಯಲು ಸಾಧ್ಯವಾಗುವುದೇ ಇಲ್ಲ.[೨]

**ರಾಜೇಂದ್ರ ಚೆನ್ನಿ**

ನಮ್ಮ ಕಾಲದ ಶ್ರೇಷ್ಠ ಬರಹಗಾರರಲ್ಲಿ ಒಬ್ಬರಾದ ಮೊಗಳ್ಳಿ ಗಣೇಶ್ ಅವರ ಹೊಸ ಕಥಾಸಂಕಲನಕ್ಕೆ ಮುನ್ನುಡಿ ಬರೆಯುವ ಅವಕಾಶ ನನಗೆ ದೊರೆತದ್ದು ನನಗೆ ಸಂದ ದೊಡ್ಡ ಗೌರವವೆಂದುಕೊಂಡಿದ್ದೇನೆ. ಅವರ ಬುಗುರಿ ಸಂಕಲನದ ಕತೆಗಳನ್ನು ಓದಿದಾಗಲೇ ನಮ್ಮನ್ನು ಸದಾಕಾಲಕ್ಕೂ ತಳಮಳಗೊಳಿಸುವ ಸಾಮರ್ಥ್ಯವುಳ್ಳ, ತನ್ನದೇ ಆದ ಕಥನ ಪ್ರಪಂಚವನ್ನು ಕಟ್ಟಿಕೊಂಡಿರುವ ಮತ್ತು ತನ್ನ ಪರಿಚಯದ ಗಾಢವಾದ ಜಗತ್ತಿನ ವಾಸ್ತವಗಳನ್ನು ಆತ್ಯಂತಿಕವಾಗಿ ಹಚ್ಚಿಕೊಂಡಿದ್ದೂ ಅವುಗಳ ಮೂಲಕ ಇಡೀ ಮನುಷ್ಯಕುಲದ ಅನುಭವವನ್ನು ಹಿಡಿಯುವ ಬೀಸು ಮತ್ತು ಮಹತ್ವಾಕಾಂಕ್ಷೆಯುಳ್ಳ ಶ್ರೇಷ್ಠ ಕತೆಗಾರರು ಇವರು ಎನ್ನುವುದು ಸಾಬೀತಾಗಿತ್ತು. ನಮ್ಮ ಸಾಹಿತ್ಯಿಕ ಮಾನದಂಡಗಳ ಆಚೆಗೆ ಪ್ರತಿಭಾವಂತ ಬರಹಗಾರನ ಒಟ್ಟು ಧಾಟಿಯಲ್ಲಿ ಯಾವುದೇ ಒಂದು ನಮ್ಮನ್ನು ಸೆಳೆಯುತ್ತದಲ್ಲವೇ? ಹಾಗೆ ನನಗೆ ಮೊಗಳ್ಳಿ ಗಣೇಶ್‌ರ ಬಗ್ಗೆ ಅನ್ನಿಸಿದ್ದೆಂದರೆ ಈ ಕತೆಗಾರ ತನ್ನ ಸಮುದಾಯದ ಯಾವತ್ತೂ ಅಳಲುಗಳಿಗೆ ತಾನೇ ಅಸಲಿ ಹಕ್ಕುದಾರನೆಂಬಂತೆ ಅವುಗಳನ್ನು ಆವಾಹಿಸಿಕೊಂಡು ಬರೆಯುತ್ತಾನಲ್ಲ ಎಂದು ಅವರ ಎಲ್ಲಾ ಕಥನಗಳ ಹಿಂದಿರುವ ಸ್ಥಾಯಿಭಾವವೆಂದರೆ ಈ ಅಳಲು; ಅದರ ಬೆನ್ನು ಹಿಂದೆಯೇ ಬರುವ ದಟ್ಟವಾದ ವಿಷಾದ. ಅವರ ಎಷ್ಟೋ ಕತೆಗಳ ನಿರೂಪಕ ತನ್ನನ್ನೇ ಹಿಂಗಿಸಿಕೊಳ್ಳುವ ಗೀಳಿನಿಂದ ಎನ್ನುವ ಬಗೆಯಲ್ಲಿ ಈ ಅಳಲುಗಳನ್ನು ಬೆಂಬತ್ತಿ ಹೋಗುತ್ತಾನೆ. ಕತೆಗಾರಿಕೆಯ ಪ್ರತಿಭೆಯಿಂದಾಗಿ ತಾನು ಸೊಲ್ಲುಗೊಡುತ್ತಿರುವ ಅಳಲಿನಿಂದ ದೂರ ನಿಂತು ಬರೆಯುತ್ತಿದ್ದಾನೆ ಎನ್ನಿಸಿದರೂ ಅದು ಅವನಿಗೆ ಅಪರಿಹಾರ್ಯವಾಗಿ ಕಾಣುತ್ತದೆ. ಮನುಷ್ಯ ಸ್ವಭಾವದ ನಿಯತಿಯೇ ಹಾಗೆ; ಸಣ್ಣತನ, ಯಾವುದೇ heroism ಇಲ್ಲದ ಕ್ರೌರ್ಯ, ಆತ್ಮವಿನಾಶಕ್ಕೆ ಸದಾ ಸಿದ್ಧವಾಗಿರುವ ದೌರ್ಬಲ್ಯ, ಸ್ವಾರ್ಥ ಮತ್ತು ಇವೆಲ್ಲವುಗಳಿಗೆ ಮೀರಿದಂತೆ ಅವಮಾನಗಳಿಂದ ಹೊರಬರಲಾರದ ಅಸಹಾಯಕತೆ ಇವುಗಳೇ ಮನುಷ್ಯ ಸ್ವಭಾವದ ಸಹಜ ಗುಣಗಳಾಗಿರಬಹುದೇನೋ ಎನ್ನುವ ಧೋರಣೆ ಈ ಕಥನಗಳ ಹಿಂದಿರಬಹುದೆಂಬ ಭಾವನೆ ನಮಗೆ ಬರಬಹುದು. ಆದರೆ ಇದು ನಿಜವಲ್ಲ. ಹಾಗೆ ಮನುಷ್ಯ ಸ್ವಭಾವದ ಸ್ವಾಭಾವಿಕವಾದ ಲಕ್ಷಣಗಳನ್ನು ಹುಡುಕುವ ಧಾರ್ಮಿಕ ಅಥವಾ ನೈತಿಕ ಸಂಪ್ರದಾಯಗಳಿಂದ ಮೊಗಳ್ಳಿಯವರ ಬರಹ ತನ್ನ ದೂರವನ್ನು ಕಾಯ್ದುಕೊಂಡಿದೆ.

ಮೇಲೆ ನಾನು ಪಟ್ಟಿಮಾಡಿದ ಅವನೀತಿಯ ಗುಣಗಳು ಗಣೇಶರ ಕತೆಗಳಲ್ಲಿ ಕಂಡುಬರುವುದು. ಕೆಳಗಿನ ಕೇರಿಯವರಲ್ಲಿ ಮನುಷ್ಯ ಜೀವನದ ಯಾವ ಸಾಧ್ಯತೆಯನ್ನೂ ಉಳಿಯಗೊಡದ ಮೇಲಿನ ಕೇರಿಯವರಿಂದಾಗಿ ತನ್ನನ್ನೇ ಹಿಂಗಿಸಿಕೊಳ್ಳುತ್ತ, ತನ್ನ ಅಳಲುಗಳಿಗೆ ಕಾರಣಗಳನ್ನೇ ಕಂಡುಕೊಳ್ಳಲಾಗದ ಎಲ್ಲಾ ಬಗೆಯ ಎಡವಟ್ಟುಗಳನ್ನು ಮಾಡಿಕೊಳ್ಳುವ ಸಮುದಾಯದ ಪ್ರತಿನಿಧಿಗಳಲ್ಲಿ. ಅಂದರೆ ಈ ಅಳಲು ಇಡೀ ಮನುಕುಲದ ಅಳಲೇ ಆಗಿರಬಹುದು, ಮನುಷ್ಯ ಸ್ವಭಾವದ ಅಪರಿಹಾರ್ಯ ಗುಣವೇ ಆಗಿರಬಹುದು ಅಂತ ಅನ್ನಿಸಿದರೂ ಈ ಕಥನಗಳು ಅದ್ಭುತವಾಗಿ ಸೂಚಿಸುವಂತೆ ಈ ಅಳಲು ಚರಿತ್ರೆಯ ಕೂಸು. ಮೇಲಿನ ಕೇರಿ, ಕೆಳಗಿನ ಕೇರಿ ಎನ್ನುವ ಶ್ರೇಣಿಗಳಲ್ಲಿ, ಹತ್ತಿರದಲ್ಲಿದ್ದೂ ಒಟ್ಟಿಗಿರಲಾರದು. ಎರಡು ಜಗತ್ತುಗಳಲ್ಲಿ ಮನುಷ್ಯ ಜೀವನವನ್ನು ಇಬ್ಭಾಗ ಮಾಡಿದಾಗಲೇ ಈ ಅಳಲು ಹುಟ್ಟಿಕೊಂಡಿದ್ದು. ಆದ್ದರಿಂದಲೇ ಈ ಮೇಳಕ್ಕೆ ಕೊನೆಯೇ ಇಲ್ಲ. ಕ್ರೂರವಾದ ಜಾತಿ ವ್ಯವಸ್ಥೆ ಈ ದೇಶದ ಬದುಕನ್ನು ಹೇಸಿಗೆಗೊಳಿಸಿಬಿಟ್ಟಿದೆ ಎನ್ನುವುದನ್ನು ಗಣೇಶರಷ್ಟು ಆರ್ತತೆಯಿಂದ, ತೀವ್ರತೆಯಿಂದ ಬಹಳ ಜನ ಹೇಳಿರಲಾರರು. ಆದರೆ ಇದು ಮೇಲಿನ ಕೇರಿಯವರ ಕಡೆಗೆ ಬೆರಳು ಮಾಡಿ ಕೂಗಿ,

ಕಿರುಚಿ ಹೇಳುವ ರೀತಿಯಲ್ಲಲ್ಲ. ತನ್ನ ಜನರ, ಅವರಿಗೇ ಅರ್ಥವಾಗದ, ಅಳಲುಗಳನ್ನು ನೋಡುತ್ತ ಅವಮಾನದಿಂದ ತಲೆತಗ್ಗಿಸಿ ಕೂತಂತೆ ಗಣೇಶರ ಹಲವಾರು ಕತೆಗಳ ನಿರೂಪಕ ಮಾತನಾಡುತ್ತಾನೆ. ಕೆಲವು ಕತೆಗಳಲ್ಲಂತೂ ಮೇಲುಕೇರಿಯವರು ಈ ಹೊಲೆಯರ ಜೀವನವೇ ಇಷ್ಟು ಎಂದು ಅಸಡ್ಡೆಯಿಂದ ಹೇಳುತ್ತಿರಬಹುದಲ್ಲವೇ ಎನ್ನುವ ಆತಂಕವನ್ನು ನೇರವಾಗಿಯೇ ವ್ಯಕ್ತಪಡಿಸುತ್ತಾರೆ. ಗಣೇಶರ ವಿಶಿಷ್ಟ ಶಕ್ತಿ ಇರುವುದು ಇಲ್ಲಿಯೇ. ಒಂದು ಕಡೆಗೆ ಈ ಕೇರಿಗಳನ್ನೂ ಸೃಷ್ಟಿ ಮಾಡಿರುವ ಸಮಾಜ, ಚರಿತ್ರೆ, ಜಾತಿವ್ಯವಸ್ಥೆ, ಇವುಗಳನ್ನು ನಿಚ್ಚಳವಾಗಿ ನೋಡಿ ಅರ್ಥಮಾಡಿಕೊಂಡಿರುವ ನಿಶಿತ ಬುದ್ಧಿ ಇದೆ; ಇನ್ನೊಂದು ಕಡೆಗೆ ಇವುಗಳನ್ನು ಅರ್ಥಮಾಡಿಕೊಳ್ಳಲಾಗದೇ ಚರಿತ್ರೆಯ ಪಾಠಗಳನ್ನು ಬರೀ ಅಳಲಿನ ಮೂಲಕ ಅನುಭವಿಸುವ ದಲಿತ ಪ್ರಪಂಚಂದ ಬಗ್ಗೆ ಗಾಢವಾದ ಭಾವನೆಗಳಿವೆ. ಇವೆರಡನ್ನು ಮೊಗಳ್ಳಿ ಗಣೆ ಹದವಾಗಿ ಮೇಳವಿಸಿ ಬರೆಯುತ್ತಾರೆ. ಹೀಗಾಗಿಯೇ ಬಹುಶಃ ಕತೆಗಾರ ಮೊಗಳಿ ಗಣೇಶ್ ತನ್ನ ಸಮುದಾಯದ ಆತ್ಮವಿಮರ್ಶೆಯ, ಅತ್ಯಂತ ತಳಮಳದ ನೋವುಗಳಿಂದ ಹೊರಬರಲಾರರು. ಶಿಕ್ಷಣ, ನೌಕರಿ, ನಗರವಾಸ, ಇವುಗಳಿಂದಾಗಿ ತನ್ನ ಕೇರಿಯಿಂದ ಎಷ್ಟೇ ದೂರ ಬಂದರೂ ಅದು ಹಳವಂಡವಾಗಿ, ಮುಜುಗುರವಾಗಿ, ಅವಮಾನವಾಗಿ, ಬಾಲ್ಯವಾಗಿ, ಕಾಮದ ಅನುಭವವಾಗಿ ಹೀಗೆ ಏನೇನೋ ಆಗಿ ಅವರನ್ನು ಸದಾ ಬೆಂಬಿತ್ತಿರುತ್ತದೆ. ಇಲ್ಲಿಯ ಕತೆಗಳನ್ನು ಓದಿ ಮತ್ತೆ ಅವರ ಬುಗುರಿ ಮತ್ತು ಅತ್ತೆ ಸಂಕಲನದ ಕತೆಗಳನ್ನು ಓದಿದಾಗ ಒರಟು ಓದಿನಲ್ಲಿ ಸರಿಯಾಗಿ ಗ್ರಹಿಸಿರದಿದ್ದ ಅಂಶಗಳು ನನಗೆ ಸ್ಪಷ್ಟವಾದವು. ಇಂಥ ಒಂದು ಮುಖ್ಯ ಅಂಶವೆಂದರೆ ಬರಹಗಾರನ ಸಂವೇದನೆಯನ್ನು ಸೃಷ್ಟಿಸಿರುವ ಅವರ ಸಮುದಾಯದ ನಂಬಿಕೆಗಳು. ಆಳದಲ್ಲಿ ಮನುಷ್ಯ ಕುಲದಲ್ಲಿ ಶ್ರೇಣಿಗಳನ್ನು ಒಪ್ಪುವುದೇ ಇಲ್ಲವಾದ್ದರಿಂದ, ಸಮಾಜದ ಅಸಮಾನತೆ, ಅನ್ಯಾಯಗಳ್ನು ವಿಕೃತಿಯಾಗಿ (asserration) ನೋಡುತ್ತೇವೆಯೇ ಹೊರತು ಹಿಂಸೆಯಿಂದಲೇ ನಿಂದಿಸಬೇಕಾದ ಸ್ಥಿತಿಗಳಾಗಿ ಅಲ್ಲ. ಜಗತ್ತಿನ ಎಲ್ಲಾ ದಮನಿತ ಸಮುದಾಯಗಳಂತೆ ಈ ಸಮುದಾಯವೂ ಅಂತಃಕರಣದ ಪಕ್ಷದ ಪರವಾಗಿದೆಯೇ ಹೊರತು ನ್ಯಾಯದ ಪರವಾಗಿಲ್ಲ. justice ಮತ್ತು mercy ಇವುಗಳಲ್ಲಿ mercy ಯನ್ನು ಮಾತ್ರ ಅಪೇಕ್ಷಿಸುವ ಸಮುದಾಯ ಇದಾಗಿದೆ. ದಕ್ಷಿಣ ಆಫ್ರಿಕಾದಲ್ಲಿ ವರ್ಣದ್ವೇಷೀ ಬಿಳಿಯರ ಆಳ್ವಿಕೆಯಲ್ಲಿ ಗಂಡು ಮಕ್ಕಳು ಎಲ್ಲರನ್ನೂ ಕಳೆದುಕೊಂಡು ಮಾನಭಂಗಕ್ಕೆ ಈಡಾಗಿದ್ದ ಕಪ್ಪು ಮಹಿಳೆಯರು ನೆಲ್ಸನ್ ಮಂಡೇಲಾರ ಸರಕಾರವು ಅನುಷ್ಠಾನಕ್ಕೆ ತಂದ ಆಯೋಗಗಳ ಎದುರಿಗೆ ಸಾಕ್ಷಿ ನೀಡುತ್ತ ಆ ಬಿಳಿಯರಿಗೆ ಶಿಕ್ಷೆ ಕೊಡಿಸುವ ನ್ಯಾಯ ತಮಗೆ ಮುಖ್ಯವಲ್ಲವೆಂದು ಹೇಳಿದರು. ಅವರಲ್ಲಿ ಒಬ್ಬಳು "ಅವರು ನನ್ನ ಗಂಡನನ್ನು ಎಳೆದುಕೊಂಡು ಹೋದರು. ಅವನ ಫೋಟೋ ಕೂಡಾ ಜಪ್ತಿ ಮಾಡಿಕೊಡು ಹೋದರು. ಈಗ ನಾನು ನ್ಯಾಯ ಕೇಳುವುದೇನು ಬಂತು. ಸಾಧ್ಯವಾದರೆ ನನ್ನ ಗಂಡನ ಫೋಟೋ ವಾವಸ್ ಕೊಡಿಸಿ" ಎಂದು ಮಾತ್ರ ಕೇಳಿದಳು. ಮೊಗಳ್ಳಿ ಅವರ ಕೇರಿಯ ಜನಾ ಕೂಡಾ ಇಂಥಹವರೇ. ದಬ್ಬಾಳಿಕೆ ಮಾಡುವುದರಲ್ಲೇ ಮೈಮರತು ವಿಜೃಂಭಿಸುವ ಮೇಲಿನ ಕೇರಿಯವರ ಬಗ್ಗೆ ಸಾಧ್ಯವಾದರೆ ಕರುಣೆ ತೋರಿಸುವಂಥ ಮಂದಿ.

ಇಂಥದೇ ಒಂದು ದೊಡ್ಡ ತಿಳಿವಳಿಕೆ ಗಣೇಶರ ಸಂವೇದನೆಯನ್ನು ತಿದ್ದಿದೆ. ಆದ್ದರಿಂದಲೇ ಅವರು ತಮ್ಮ ಕೇರಿಯ ಅಳಲಿನ ಮೂಲಕ ಚರಿತ್ರೆಯನ್ನು ಅರ್ಥಮಾಡಿಕೊಳ್ಳಬಲ್ಲರು. ಕೇರಿಯ ಅಜ್ಜಿ, ತಾತಂದಿರು ಹೇಳುವ ಜನಪದ ಪುರಾಣಗಳ ಮೂಲಕ ಒಟ್ಟು ಮನುಷ್ಯ ಬದುಕಿನ ವಿಸ್ತಾರವಾದ ಲಯಗಳನ್ನು ಅರ್ಥಮಾಡಿಕೊಳ್ಳಬಲ್ಲರು. ತೋಪು ಕಥೆಯ ಅಜ್ಜಿ ಬಿಲ್ಪತ್ರೆ ಮರದ ಬಗ್ಗೆ ಹೇಳುವ ಕತೆ ಕೇರಿಯ ಜನರ ಜೀವನ ಗ್ರಹಿಕೆಗೆ ದ್ಯೋತಕವಾಗಿದೆ. ಒಬ್ಬ ಹಾರುವರ ಹೆಣ್ಣುಮಗಳು, ಮುಟ್ಟಸಿಕೊಳ್ಳದ ಒಬ್ಬ ಭಿಕ್ಷುಕ ಒಂದಾಗಿ ಇಡೀ ಸಮಾಜಕ್ಕೆ ಬಾಹಿರರಾಗುತ್ತಾರೆ.

ಇಷ್ಟಾದರೂ ನಮ್ಮನ್ನು ತಿರಸ್ಕರಿಸಿದವರಿಂದಲೇ ನಾವು ಅವರಿಗೆ ಅನನ್ಯವಾಗಿ ಪವಿತ್ರವಾಗಿ ಉಳಿಯೋಣವೆಂದು ಒಬ್ಬರಲ್ಲೊಬ್ಬರು ಐಕ್ಯವಾಗಿ ಬಿಲ್ವಪತ್ರೆ ಮರವಾಗುತ್ತಾರೆ. ಸಂಘರ್ಷವಿರುವಲ್ಲಿ ಐಕ್ಯತೆಯನ್ನು, ಇಬ್ಭಾಗ ಇರುವಲ್ಲಿ ಒಪ್ಪಂದವನ್ನೂ ಕಾಣುವ ಜೀವನಗ್ರಹಿಕೆ ಈ ಸಮುದಾಯದ ನಂಬಿಕೆಗಳ ಹಿಂದಿದೆ. ಆದ್ದರಿಂದಾಗಿ ಗಣೇಶ್‌ರ ಬರಹದಲ್ಲಿ ಸ್ಥಾಯಿಭಾವವಾಗಿ ಕಾಣುವ ವಿಷಾದ ಕೂಡ ಇಂಥ ಐಕ್ಯದ ಸ್ಥಿತಿ ಕಳೆದುಹೋಗಿ ವಿಕೃತವಾಗಿ ನೂರಾರು ಕೇರಿಗಳು ಹುಟ್ಟಿಕೊಂಡವಲ್ಲಾ ಎನ್ನುವ ವಿಷಾದವೇ ಆಗಿವೆ. ಕೇರಿಯ ಜನರು ಅರ್ಥವಾಗದ ಅಳಲ ಬಗ್ಗೆ ಅನ್ನಿಸುವ ವಿಷಾದವೂ ಇದೇ ಧಾಟಿಯ ಹಂಬಲವಾಗಿದೆ.

ಒಂದು ಹಿರಿದಾದ ಅರ್ಥದಲ್ಲಿ ಗಣೇಶರದು ಆಳದಲ್ಲಿ ರೋಮ್ಯಾಂಟಿಕ್ ಆದ ಧೋರಣೆಯ ಅಥವಾ ಈ ಪದ ವಿಕೃತಗೊಂಡಿರುವುದರಿಂದ ಆದರ್ಶಪ್ರಿಯ ಸ್ವಭಾವವೆಂದು ಕರೆಯಬಹುದು. ಈ ಆದರ್ಶಪ್ರಿಯ ಸ್ವಭಾವಕ್ಕೂ ಅವರ ಬರಹದಲ್ಲಿ ಕಾಣುವ ಅತಿ ಸಾಂದ್ರವಾದ ವಾಸ್ತವವಾದಕ್ಕೂ ಯಾವುದೇ ಅಂತರ್‌ವೈರುಧ್ಯವಿಲ್ಲ. ಮಲವನ್ನೇ ಪ್ರಧಾನರೂಪಿತವಾಗಿಟ್ಟುಕೊಂಡು 'ಅಮಾದಿ ಮನುಷ್ಯನ' ಪುರಾಣವನ್ನು ಸೃಷ್ಟಿಸಿಕೊಂಡು ಬದುಕಿನ ಅಸಹ್ಯಗಳ ಬಗ್ಗೆ ಉಗ್ರ ನಿಷ್ಠೆಯಿಂದ ಬರೆಯುವ ಮೊಗಳ್ಳಿ ತಮ್ಮ ಸಮುದಾಯದಿಂದ ಬಳುವಳಿಯಾಗಿ ಪಡೆದುಕೊಂಡದ್ದು ಬದುಕಿನ ಮೂಲ ವಿಚಿತ್ರತೆಯ ಬಗೆಗಿನ ಶ್ರದ್ಧೆಯನ್ನೇ. ತೋಪು ಕತೆಯಲ್ಲಿ ಹಿರಿಯರನ್ನು ಮಣ್ಣು ಮಾಡುವ ಸ್ಮಶಾನ 'ಜೀವ್‌ಗಾಡು' ಎಂದು ಹೆಸರಾಗಿ ಕೇರಿಯ ಮಕ್ಕಳಿಗೆ ಸುಂದರ ಸಿರಿವನವಾಗಿ, ಆಶ್ರಯವಾಗಿರುತ್ತದೆ. ಮರಗಳು ನಮ್ಮ 'ಕಾಯುವ ದೈವ'ಗಳಾಗಿ ತೋರುತ್ತವೆ. ತೋಪು ಸಂಕೇತಿಸುವ ಮಾನವಲೋಕಕ್ಕೆ ಧಕ್ಕೆ ಬರುವುದು ಪೇಟೆಯ ಬದುಕು ತರುವ ವಿಸ್ಮೃತಿಯಿಂದ ಹೊಸ ಜಗತ್ತಿನ ಕ್ಷುಲ್ಲಕ ರಾಜಕೀಯದಿಂದ ಅಥವಾ ಹೊಸ ತಲೆಮಾರಿನ ನರದೌರ್ಬಲ್ಯದಿಂದ.

ಬುಗುರಿ ಸಂಕಲನದ ನನ್ನಜ್ಜನಿಗೊಂದಾಸೆಯಿತ್ತು ಕತೆಯ ಮುಖ್ಯ ವಸ್ತುವಾಗಿದ್ದ 'ವಿಘಟನೆ ಮತ್ತು ಮರು ಹಂಬಲ' ಮೊಗಳ್ಳಿಯವರ ಪ್ರಧಾನ ಕಾಳಜಿಗಳಲ್ಲೊಂದಾಗಿದೆ. ಇದು ಈ ಸಂಕಲನದಲ್ಲಿಯೂ ಪ್ರಾಮುಖ್ಯವೇ ಆಗಿದೆ. ಇದು ಬಹಳ ವಿಶಿಷ್ಟವಾದ ಮರುಹಂಬಲ. ಬಹಳ ಸೂಕ್ಷ್ಮವಾಗಿ ಅದನ್ನು ಸಾರಾಂಶದ ರೂಪದಲ್ಲಿ ಮಂಡಿಸಿದರೂ ಅನೂಯವಾಗುವಷ್ಟು ಸೂಕ್ಷ್ಮವಾಗಿ ಹಿಂದೆ ಹೀಗಿರಲಿಲ್ಲವೆನ್ನುವ ಒಂದು ತಿಳುವಳಿಕೆ ಇವರ ಬರಹದಲ್ಲಿದೆ. ಯಾವ ಕಾಲಕ್ಕೂ ಪರಿಹಾರವೇ ಇಲ್ಲದೇ ಪುನರಾವರ್ತನೆಯಾಗುತ್ತಲೆ ಇರುವ ರಂದಿ ರೇಜಿಗೆಗಳ ಮೊತ್ತ ಮುಕ್ತವಾಗಿ ಕೇರಿಯ ಜನರ ಬದುಕು ಕಂಡು ಬಂದರೂ ಒಂದು ವಿಶೇಷವಾದ ಅರ್ಥದಲ್ಲಿ ಹಿಂದೆ ಹೀಗಿರಲಿಲ್ಲ ವೆನ್ನುವ ಒಂದು ತಿಳುವಳಿಕೆ ಇವರ ಬರಹದಲ್ಲಿದೆ. ಯಾವ ಕಾಲಕ್ಕೂ ಪರಿಹಾರವೇ ಇಲ್ಲದೇ ಪುನರಾವರ್ತನೆಯಾಗುತ್ತಲೆ ಇರುವ ರಂದಿ ರೇಜಿಗೆಗಳ ಮೊತ್ತ ಮುಕ್ತವಾಗಿ ಕೇರಿಯ ಜನರ ಬದುಕು ಕಂಡು ಬಂದರೂ ಒಂದು ವಿಶೇಷವಾದ ಅರ್ಥದಲ್ಲಿ ಹಿಂದೆ ಹೀಗಿರಲಿಲ್ಲ. ಈ ಸಮುದಾಯಕ್ಕೆ ತನ್ನದೇ ಆದ ಅರಿವಿನ ದಾರಿಗಳಿದ್ದವು. ಮೇಲುಕೇರಿಯವರ ಕ್ರೂರವಾದ ಯಜಮಾನಿಕೆಯ ನೆರಳಿನಲ್ಲೂ ಅದು ಕಟ್ಟಿಕೊಂಡಿದ್ದ ಜೀಪರವಾದ ನಂಬಿಕೆಗಳು, ಆಚರಣೆಗಳು ಇದ್ದವು. ಇನ್ನೂ ಸೂಕ್ಷ್ಮವಾಗಿ ಬಗೆದು ನೋಡಿದರೆ ಮನುಷ್ಯದ್ವೇಷಿಯಾದ ಮೇಲುಕೇರಿಯ ಸಂಸ್ಕೃತಿಗೆ ಪರ್ಯಾಯವಾಗಿ ನಿಲ್ಲಬಲ್ಲದ್ದು ಇವುಗಳೇ. ಆದರೆ ಆಧುನಿಕತೆ, ಜಾತಿ ರಾಜಕೀಯ ಮತ್ತು ಹೊಸ ಬದುಕಿನ ಲಂಪಟ ಭ್ರಮೆಗಳು ಇವುಗಳನ್ನು ನಾಶಮಾಡುತ್ತಾ ಬಂದಿವೆ. ನನ್ನಜ್ಜನಿಗೊಂದಾಸೆಯಿತ್ತು ಕತೆಯ ತಣಿಗೆ, ಈ ಸಂಕಲನದ ತೋಪು ಕತೆಯ ತೋಪು, ಮಿಂಚುಳ ಕತೆಯ ಕೆರೆ ಇವುಗಳು ಸದ್ದಿಲ್ಲದೆಯೇ ಹಿಂದಿನ ಆ ಬದುಕಿನ ಪ್ರತಿಮೆಗಳಾಗಿ ಪ್ರವೇಶ ಮಾಡಿಬಿಡುತ್ತವೆ. ಕುತೂಹಲಕರವಾದ

ಅಂಶವೆಂದರೆ ಕಾರಂತರ ಕಾದಂಬರಿಗಳಲ್ಲಿಯಂತೆ ಗಣೇಶರ ಕತೆಗಳಲ್ಲಿ ಕೂಡ ತಮ್ಮ ನಂಬಿಕೆಗಳಿಗೆ ಬದ್ಧರಾಗಿ ಬದುಕುವ ಮೂಲಕ ಸಾರ್ಥಕತೆ ಪಡೆಯುವ ಹಿಂದಿನ ತಲೆಮಾರಿನ ಪಾತ್ರಗಳಿವೆ. ಹೀಗೆ ದೊಡ್ಡ ಪಟ್ಟಿಯನ್ನೇ ಮಾಡಬಹುದು. ಇವರಿಗೆ ವೈದೃಶ್ಯವಾಗಿ ಹೊಸ ತಲೆಮಾರಿನ ಪಾತ್ರಗಳು, ದಿಕ್ಕುತಪ್ಪಿರುವ ತಬ್ಬಲಿಗಳು ಅಥವಾ ನಂಬುಗೆಯ ತಳಪ್ಪಾಯವೇ ಇಲ್ಲದ ಲಂಪಟರು, ಸ್ವಾರ್ಥಿಗಳು ಗಣೇಶರ ಕತೆಗಳಲ್ಲಿ ಕೂಡ ಅಪಾರ ಸಹನೆಯ ಗಟ್ಟಿಗತನದ ಹೆಣ್ಣುಪಾತ್ರಗಳೇ ತಾಳಿಕೆಯುಳ್ಳವರು.

ಹೀಗೆ ಸಮುದಾಯದ ಒಂದುಕಾಲದ ಬದುಕಿನ ಬಗ್ಗೆ, ಜನರ ಬಗ್ಗೆ ಮರುಹಂಬಲದ ಧೋರಣೆ ಹೊಸ ಬದುಕಿನ ಹೆಬ್ಬಾಗಿಲಿನಲ್ಲಿ ನಿಂತಿರುವ ಇಂದಿನ ಸಮುದಾಯದ ದೌರ್ಬಲ್ಯಗಳನ್ನು ಅಳೆಯಲು ಮೊಗಳ್ಳಿಯ ಕತೆಗಳು ಒಂದು ಮಾನದಂಡವಾಗುತ್ತವೆ. ಅದೆ ಹೊಟ್ಟೆಗೆ ಮೇಲಿನ ಕೇರಿಯವರ ಕಾರಣವೇ ಇಲ್ಲದ ಕ್ರೌರ್ಯದ ವಿರುದ್ಧ ನೆಚ್ಚಿಕೊಳ್ಳಬಹುದಾದ ನೆಲೆಯೊಂದನ್ನು ತೋರಿಸುತ್ತವೆ. ಈ ಮಾತನ್ನು ಯಾಕೆ ಹೇಳುತ್ತಿದ್ದೇನೆಂದರೆ ಮೊಗಳ್ಳಿ ಗಣೇಶ್‌ರ ನಿರೂಪಣೆ ತನ್ನ ಬಾಲ್ಯದ ಸಮುದಾಯದಿಂದ ದೂರವಾಗಿದ್ದಾನೆ, ಮೇಲುಕೇರಿಯ ಹುಡುಗನ ಹಾಗೆ ತನ್ನ ಮನೆಗೇ ಅಪರಿಚಿತನಾಗಿಬಿಟ್ಟಿದ್ದಾನೆ. ಆದರೆ ಅವನು ಬದುಕುತ್ತಿರುವ ಪೇಟೆ ಕತೆಗಳಲ್ಲಿ ಎಲ್ಲಿಯೂ ಮೂರ್ತವಾಗಿ ಪ್ರವೇಶ ಮಾಡಿಲ್ಲ. ಹೀಗಾಗುವುದರ ಹಿನ್ನೆಲೆಯಲ್ಲಿ ಹಿಂದಿನ ಕಾಲದ ಕೇರಿಯ ಬಗೆಗಿನ ಮರುಹಂಬಲದ ಧೋರಣೆಯನ್ನು ಬಹಳ ಎಚ್ಚರದಿಂದ ವಿಮರ್ಶಿಸಬೇಕಾಗಿದೆ.

ಬುಗುರಿ ಸಂಕಲನದ ಈ ಮೇಳಕ್ಕೆ ಕೊನೆಯುಂಟೆ ಕತೆ ಕನ್ನಡಕ್ಕೆ ಅಪೂರ್ವವಾದುದು. ಅಲ್ಲಿ ಗಣೇಶ್ ಇಡೀ ಮನುಷ್ಯ ಚರಿತ್ರೆಯನ್ನೇ ತೆಕ್ಕೆಗೆ ತೆಗೆದುಕೊಂಡು ಪುರಾಣ ಕಥನದ ಶೈಲಿಯಲ್ಲಿ ರೂಪಿತಗಳ ಮೂಲಕ ಇವರು ಮತ್ತು ಅವರ ಸಂಘರ್ಷವನ್ನು ಕಥನಿಸುವ ಪ್ರಯತ್ನ ಮಾಡಿದ್ದರು. ಈ ಕಥಾಸಂಕಲನದಲ್ಲೂ ಈ ಪ್ರಯತ್ನ ಮುಂದುವರೆದಿದೆ. 'ತಲತಲಾಂತರದ ನನ್ನಿಯನ್ನು' ಹೇಳುವುದಕ್ಕಾಗಿ ದೇವನೂರು ಮಹಾದೇವ magic realism ಅನ್ನು ಹೋಲುವ ಶೈಲಿಯನ್ನು ಬಳಸಿದರೆ, ಗಣೇಶ್ ಪುರಾಣಗಳನ್ನೇ (myth) ಸೃಷ್ಟಿಸಿ ಬಳಸಿಕೊಳ್ಳುತ್ತಾರೆ.

.................... .................... ....................

ಮುಗಿಸುವ ಮೊದಲು ಒಂದು ಮಾತು. ಮೊಗಳ್ಳಿ ಗಣೇಶ್‌ರ ಕತೆಗಳಲ್ಲಿ ಕೆಳಗಿನ ಕೇರಿಯ ಜನರ ಅತ್ಯಂತ ನಿರ್ಮಲವಾದ ಆತ್ಮವಿಮರ್ಶೆ ಇದೆಯೆಂದು ಹೇಳಿದೆ. ಸಾಮಾಜಿಕ ಅನ್ಯಾಯದ ನಿಜವಾದ ಚಾರಿತ್ರಿಕವಾದ ಸತ್ಯದ ಬೆಂಬಲವೇ ಇರುವಾಗಲೂ ಕೆಳಗಿನ ಕೇರಿಯವರು ನಿಷ್ಠುರವಾದ ಆತ್ಮವಿಮರ್ಶೆಯಲ್ಲಿ ತೊಡಗಿದ್ದಾರೆ. ಆದರೆ ಮೇಲಿನ ಕೇರಿಯವರು? ಸ್ವವಿಮರ್ಶೆಯ ಬದಲಾಗಿ ಬಲಾಢ್ಯತೆಯನ್ನೇ ನೆಚ್ಚಿಕೊಂಡು ಮನಸ್ಸು ಬುದ್ಧಿಗಳನ್ನು ಮುಚ್ಚಿಕೊಂಡು ಪ್ರಾಯಶ್ಚಿತ್ತಕ್ಕೂ ಹೊರಗಾಗಿದ್ದಾರೆ. ಚರಿತ್ರೆಗೂ ಹೊರಗಾಗಿದ್ದಾರೆ. ಕರ್ಮಠರೂ ಕ್ರೂರರೂ ಆಗಿದ್ದಾರೆ. ಇಂಥ ಹೊತ್ತಲ್ಲಿ ಮೊಗಳ್ಳಿ ಗಣೇಶ್‌ರು ತಮ್ಮ ಕೇರಿಯ ಬಗ್ಗೆ ಇಷ್ಟು ನಿಷ್ಠುರವಾಗಿ, ಇಷ್ಟು ಗಾಢವಾದ ಕಾವ್ಯಾತ್ಮಕ ತನ್ಮಯತೆಯ ತಾಯಿ ಸಂವೇದನೆಯಿಂದ ಬರೆಯುತ್ತ ಮನುಷ್ಯತ್ವ ಯಾವ ಕೇರಿಯಲ್ಲಿತ್ತು, ಇದೆ ಎಂದು ನೆನಪು ಮಾಡುತ್ತಾರೆ."

## ಟಿಪ್ಪಣಿಗಳು

೧. ಅಗ್ರಿಪತ್ರಿಕೆ, ಶ್ರೀಧರ, ಅವರ ಕಥನಗಳ ಮಾಂತ್ರಿಕ ಚಾಪೆಯ ಮೇಲೆ, ಜೂನ್ ೨, ೨೦೦೫

೨. ಉದಯವಾಣಿ ಪತ್ರಿಕೆಯ ಪುಸ್ತಕ ವಿಮರ್ಶೆ, ಅಕ್ಟೋಬರ್ ೨೦೦೬

೩. ಅಗ್ರಿಪತ್ರಿಕೆ, ಶ್ರೀಧರ, ಮೊಗಳ್ಳಿಯವರ ಫ್ಯಾಂಟಸಿ ಮತ್ತು ಮಾಂತ್ರಿಕತೆಯ ತೊಟ್ಟಿಲು, ಏಪ್ರಿಲ್ ೧೦, ೨೦೦೭

೪. ರಾಜೇಂದ್ರಚೆನ್ನಿ ಅವರ ಭೂಮಿ ಕಥಾಸಂಕಲನಕ್ಕೆ ಬಂರದೆ ಮುನ್ನುಡಿ. ಈ ಮುನ್ನುಡಿಯನ್ನು ಸಂಕಲನದಲ್ಲಿ ಬಳಸಿಕೊಳ್ಳಲಾಗಿರುವುದಿಲ್ಲ, ಲೇಖಕರ ವೈಯಕ್ತಿಕ ದಾಖಲೆಗಳಿಂದ.

ಅಧ್ಯಾಯ ಎಂಟು

# ಅಧ್ಯಯನದ ಫಲಿತಗಳು

ಶತಶತಮಾನಗಳಿಂದ ಜನಸಮುದಾಯದಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯವಾಗಿ ಶೋಷಣೆಗೆ ಒಳಗಾದವರು, ಒಟ್ಟು ಸಮಾಜದೊಂದಿಗೆ ಬದುಕಲಾಗದೆ, ಊರ ಹೊರಗೆ ವಾಸಿಸಿ, ಕೀಳುವೃತ್ತಿಗೆ ಅವಲಂಬಿತರಾಗಿ ತಮ್ಮ ಹೆಸರು ಹೇಳಿಕೊಳ್ಳಲು ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲರೂ ದಲಿತರೆನಿಸಿಕೊಳ್ಳುತ್ತಾರೆ. ಇಂತವರ ಕುರಿತಾದ ಬರವಣಿಗೆಯನ್ನು ದಲಿತ ಸಾಹಿತ್ಯ, ದಲಿತ ಸಂವೇದನೆ ಎಂದು ಕರೆಯಲಾಗುತ್ತದೆ. ಈ ಎಲ್ಲ ದಲಿತ ಸಾಹಿತಿಗಳನ್ನು ದಲಿತ ಸಂವೇದನಕಾರರು ಎಂದು ಕರೆಯಲಾಗುತ್ತದೆ. ದಲಿತ ಸಾಹಿತ್ಯದಲ್ಲಿ ದಲಿತೇರರ ದಲಿತ ಸಂವೇದನಕಾರರು ಎಂದು ಕರೆಯಲಾಗುತ್ತದೆ. ದಲಿತ ಸಾಹಿತ್ಯದಲ್ಲಿ ದಲಿತೇತರ ದಲಿತ ಸಂವೇದನಕಾರರು ಬರುತ್ತಾರೆ. ಮತ್ತು ದಲಿತ ಸಂವೇದನೆಕಾರರು ಬರುತ್ತಾರೆ. ಒಟ್ಟಾರೆ ದಲಿತರ ಕುರಿತಾದ ವಿಷಯ ವಸ್ತುಗಳನ್ನು ಆಯ್ದುಕೊಂಡು ಅದರ ಮೂಲಕ ದಲಿತರ ಜೀವನವಿಧಾನವನ್ನು, ಅವರಿಗೆ ಆಗುವ ಅನ್ಯಾಯ, ಶೋಷಣೆ ಅವರಿಗೆ ಅಂಟಿದ ಬಡತನ ಮತ್ತು ನಿರುದ್ಯೋಗ ಹೀಗೆ ಒಟ್ಟಾರೆ ದಲಿತ ಬದುಕಿನ ಒಳಹೊಕ್ಕು ತಮ್ಮ ಅನುಭವದ ಮೂಲಕ ಬರವಣಿಗೆಯಲ್ಲಿ ಅವರ ಲೋಕವನ್ನು ಅನಾವರಣ ಮಾಡುವುದು ದಲಿತ ಸಂವೇದನೆಯಾಗಿ ಕಂಡುಬರುತ್ತದೆ, ಆಯಾ ಲೇಖಕರು ದಲಿತ ಲೋಕಕ್ಕೆ ಪ್ರತಿಕ್ರಿಯಿಸುವ ಪ್ರಾಮಾಣಿಕತೆಯಲ್ಲಿ ಹೆಚ್ಚು ಕಡಿಮೆ ಇರಬಹುದು. ಆದರೆ ಅವರ ಕುರಿತಾದ ಪ್ರತಿಕ್ರಿಯೆ, ಕಾಳಜಿ, ಮುಂತಾದವುಗಳನ್ನು ದಲಿತ ಸಂವೇದನೆ ಎಂದು ಗುರುತಿಸಲಾಗುತ್ತದೆ.

ದಲಿತ ಸಂವೇದನೆ ಎನ್ನುವುದು ದಲಿತ ಸಾಹಿತಿಗಳೆ ಬರೆದ ಕಥನಗಳಲ್ಲಿ ಒಂದು ರೀತಿಯಾಗಿ ಮೂಡಿಬಂದರೆ ಇನ್ನು ದಲಿತೇತರ ಸಾಹಿತಿಗಳು ಬರೆದ ಕಥನಗಳಲ್ಲಿ ಒಂದು ರೀತಿಯಾಗಿ ಮೂಡಿಬರುತ್ತದೆ. ದಲಿತೇತರರ ಸಾಹಿತಿಗಳು ದಲಿತ ಬದುಕಿನ ಆಳಕ್ಕೆ ಇಳಿದು ಅವರ ನೋವು, ಅವಮಾನ, ಶೋಷಣೆಗಳಿಗೆ ಕಾರಣಗಳೇನು ಅದಕ್ಕೆ ಪರಿಹಾರಗಳೇನು ಎಂದು ಗುರುತಿಸಲು ಸಾಧ್ಯವಾಗುವಲ್ಲಿ ಅಸಮರ್ಥರಾಗಿರುತ್ತಾರೆ. ಅವರು ಕೇವಲ ದಲಿತರ ಶೋಷಣೆ ಮತ್ತು ಅವರ ಸಾಮಾಜಿಕ ಸ್ಥಾನಮಾನ, ತಾರತಮ್ಯತೆ, ಮತ್ತು ಅವರ ಬಡತನ, ನಿರುದ್ಯೋಗದ ಕುರಿತು ಕೇವಲ ಪ್ರೀತಿ, ಕರುಣೆ, ಕಾಳಜಿ, ಸಹಾನುಭೂತಿಯನ್ನು ತೋರಿರುವುದು ಕಂಡುಬರುತ್ತದೆ. ಅದಕ್ಕೆಲ್ಲ ಕಾರಣ, ಪರಿಣಾಮಗಳನ್ನು ಗುರುತಿಸಲು ಇವರಿಂದ ಸಾಧ್ಯವಾಗಿರುವುದಿಲ್ಲ. ಇನ್ನು ದಲಿತ ಸಾಹಿತಿಗಳು ತಮ್ಮ ದಲಿತಲೋಕದ ಬರವಣಿಗೆಯಲ್ಲಿ ಅವರ ಅನುಭವದ ಮೂಲಕ ಅವರ ಬದುಕಿನ ಆಳಕ್ಕೆ ಇಳಿದು ಅವರ ಜೀವನದ ಸ್ಥಿತಿಗತಿಗಳನ್ನು ಗುರುತಿಸುತ್ತಾರೆ. ಅವರ ಬದುಕು ಸಮಾಜದಲ್ಲಿ ತಾರತಮ್ಯತೆಯಿಂದ ಮತ್ತು

ಅಸಮಾನತೆಯಿಂದ ಕೂಡಿರಲು ಕಾರಣಗಳೇನು ಅದಕ್ಕೆ ಪರಿಹಾರಗಳನ್ನು ಗುರುತಿಸುತ್ತಾರೆ. ಅವರ ಕಷ್ಟದ ಬದುಕಿನ ಕುರಿತು ತಮ್ಮ ಸಾಹಿತ್ಯದಲ್ಲಿ ಪ್ರತಿಭಟನೆಯ ಧ್ವನಿಯನ್ನು ಹೊರಡಿಸುತ್ತಾರೆ. ಈ ಧ್ವನಿ ಕೇವಲ ಸಾಹಿತಿಯ ಧ್ವನಿಯಾಗಿರದೆ ಸಂಪೂರ್ಣವಾಗಿ ದಲಿತ ಸಮುದಾಯದ ಆಶಯವಾಗಿ ಕಂಡುಬರುತ್ತದೆ. ದಲಿತರಿಗೆ ಅಂಟಿಕೊಂಡ ಅಸ್ಪೃಶ್ಯತೆ, ಬಡತನ, ಕ್ರೌರ್ಯ, ಹಿಂಸೆ, ನ್ಯಾಯ, ಅನ್ಯಾಯ, ದಲಿತ ಮಹಿಳೆಯರ ಮೇಲೆ ನಡೆಯುವ ಅತ್ಯಾಚಾರ ಹೀಗೆ ಇವುಗಳನ್ನು ಗುರುತಿಸಿ ಇವುಗಳಿಗೆ ಪರಿಹಾರಗಳನ್ನು ಅವರು ದಲಿತರಿಗೆ ಮನವರಿಕೆ ಮಾಡಿಕೊಡುತ್ತಾ ಹೋಗುತ್ತಾರೆ. ಇಂತವರ ಸಾಲಿನಲ್ಲಿ ಬರತಕ್ಕಂತವರು ಮೊಗಳ್ಳಿಯವರು. ಇವರೊಬ್ಬ ಹುಟ್ಟಿನಿಂದ ದಲಿತರಾಗಿ ತಮ್ಮ ಕಥನಗಳಲ್ಲಿ ದಲಿತಲೋಕವನ್ನು ಕಟ್ಟಿಕೊಡುತ್ತಾ ಹೋಗುತ್ತಾರೆ. ಇದರಿಂದ ಅವರ ಸ್ಪಷ್ಟವಾದ ದಲಿತ ಸಂವೇದನೆ ಕಂಡುಬರುತ್ತದೆ.

ಮೊಗಳ್ಳಿ ಅವರ ಕಥನಗಳಲ್ಲಿ ಕಂಡುಬರುವ ಕಥಾವಸ್ತುಗಳು ದಲಿತ ಕಥಾವಸ್ತುಗಳು. ಬಡತನ, ಅಸ್ಪೃಶ್ಯತೆ, ಊಳಿಗಮಾನ್ಯ ವ್ಯವಸ್ಥೆಯಿಂದ ದಲಿತರಿಗೆ ಆಗುವ ಶೋಷಣೆ, ಅನ್ಯಾಯ, ಅವಮಾನ, ಸ್ತ್ರೀಪುರುಷರ ಲೈಂಗಿಕ ಸಂಬಂಧ, ಮುಂತಾದ ವಸ್ತುಗಳಿಂದ ಅವರ ದಲಿತ ಸಂವೇದನೆ ಕಂಡುಬರುತ್ತದೆ. ಲೇಖಕರು ಇಂತಹ ವಸ್ತುಗಳಿಂದ ಅವರ ಸಂಪೂರ್ಣವಾದ ದಲಿತ ಲೋಕವನ್ನು ಅನಾವರಣ ಮಾಡುತ್ತಾರೆ. ಮೇಲ್ಜಾತಿಯವರು ಎಷ್ಟೇ ಶೋಷಣೆಯನ್ನು ಮಾಡಿದರೂ ಸಹಿತ ಇವರ ಕಥಾವಸ್ತುವಿನಲ್ಲಿಯ ದಲಿತರು ಒಬ್ಬರೂ ಪ್ರತಿಭಟನೆಯಾಗಲಿ, ಹಿಂಸೆಯಾಗಲಿ ಮಾಡುವುದಿಲ್ಲ. ಯಾಕೆಂದರೆ ಲೇಖಕರು ಅದೊಂದು ದಲಿತ ಸಂಸ್ಕೃತಿ, ದಲಿತ ಜೀವನಪದ್ಧತಿ, ಮತ್ತು ವ್ಯವಸ್ಥೆಯೊಂದರ ವಿಕೃತಿಗಳೆಂದು ಗುರುತಿಸುತ್ತಾ ಹೋಗುತ್ತಾರೆ. ಇಲ್ಲಿಯ ದಲಿತ ವಸ್ತುವಿನಲ್ಲಿ ದಲಿತರು ತಮ್ಮ ಬದುಕನ್ನು ಅನಿವಾರ್ಯವಾಗಿ ಮತ್ತು ತಮ್ಮ ಹಣೆಬರಹವೆ ಅಷ್ಟೇ ಎನ್ನುವ ಹಾಗೆ ಜೀವನ ಮುಂದುವರೆಸುವುದು ಕಂಡುಬರುತ್ತದೆ.

ಮೊಗಳ್ಳಿಯವರ ದಲಿತ ಸಂವೇದನೆ ಅವರ ಕಥನಗಳ ನಿರೂಪಣಾ ವಿಧಾನದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಅವರು ಹುಟ್ಟಿನಿಂದ ದಲಿತರಾಗಿರುವುದರಿಂದ ಅವರ ಒಟ್ಟು ಸೃಜನಶೀಲ ವ್ಯಕ್ತಿತ್ವದಲ್ಲಿಯೆ ದಲಿತತ್ವದ ಅಂಶಗಳು ಅಡಗಿರುತ್ತವೆ. ಹೀಗಾಗಿ ಅವರು ಕೈ ಮುಂದುವರೆಸಿದರೆ ಸಾಕು ಅವರ ಬರವಣಿಗೆಯ ಮೂಲಕ ಅವರ ದಲಿತ ಲೋಕ ಅನಾವರಣವಾಗುತ್ತಾ ಬರುತ್ತವೆ. ಅವರ ಹಲವಾರು ಕಥನಗಳಲ್ಲಿ ಪರಂಪರೆಯ ಪ್ರತಿನಿಧಿಗಳಾದ ಅಜ್ಜಿಯರ ಮೂಲಕ ಕಥನಗಳನ್ನು ಹೇಳಿಸುತ್ತಾ ಹೋಗುತ್ತಾರೆ. ಇದರಿಂದ ದಲಿತ ಪಾರಂಪರಿಕ ಬದುಕನ್ನು ಅನಾವರಣಗೊಳಿಸುತ್ತಾರೆ. ಅಲ್ಲದೆ. ಭೂತ ವರ್ತಮಾನದ ದಲಿತ ಸಮಸ್ಯೆಗಳನ್ನು ತಳುಕುಹಾಕಿ ಚರ್ಚೆ ಮಾಡುತ್ತಾ ಹೋಗುತ್ತಾರೆ. ಅಲ್ಲದೆ ಅವರ ಕೆಲವು ಕಥನಗಳಲ್ಲಿ ದಲಿತ ಪಾತ್ರಗಳನ್ನು ಮಾತನಾಡಿಸಿ ಅವರ ಒಡಲಾಳದಿಂದ ದಲಿತರ ನೋವು, ಅವಮಾನ ಅಸಾಹಯಕತೆ ಬಡತನ, ದುಃಖ, ಮುಂತಾದವುಗಳನ್ನು ಅನಾವರಣ ಮಾಡುತ್ತಾ ಹೋಗುತ್ತಾರೆ. ಇದರಿಂದ ದಲಿತರ ನಿಜವಾದ ಪ್ರಪಂಚ ಅನಾವರಣವಾಗುತ್ತದೆ.

ಮೊಗಳ್ಳಿ ಅವರ ಕಥನಗಳು ಒಂದು ವಿಶಿಷ್ಟವಾದ ಕಥಾಸಂವಿಧಾನದಿಂದ ಕೂಡಿರುವುದು ಕಂಡುಬರುತ್ತದೆ. ಅವರು ದಲಿತರ ಬದುಕನ್ನು ಚಿತ್ರಿಸುತ್ತಾ ಹೋಗುವಾಗ ದಿಬ್ಬದ ಮನೆ ಮತ್ತು ತಗ್ಗಿನ ಮನೆ ಎಂದು ಎರಡು ಮಾಡಿ ಅವುಗಳ ವೈರುಧ್ಯಗಳನ್ನು ಗುರುತಿಸುತ್ತಾರೆ. ಈ ವೈರುಧ್ಯಗಳ ಮೂಲಕ ದಲಿತರ ಸಾಮಾಜಿಕ ಅಸಮಾನತೆ, ತಾರತಮ್ಯತೆ, ಬಡತನ, ಹಸಿವು, ಶೋಷಣೆ ಮುಂತಾದವುಗಳು ದಲಿತರನ್ನು ಹೇಗೆ ಹಿಂಸೆಗೆ ಒಳಪಡಿಸುತ್ತವೆ ಚರ್ಚೆ ಮಾಡುತ್ತಾರೆ. ದಿಬ್ಬದ ಮನೆ ಎನ್ನುವುದು ಶ್ರೀಮಂತರ ಊಳಿಗಮಾನ್ಯ ವ್ಯವಸ್ಥೆಯ ಪ್ರತಿನಿಧಿಗಳ ಪ್ರಭುತ್ವವನ್ನು ಒಳಗೊಂಡಿರುವಂತಹ ಜನಗಳು ವಾಸಮಾಡುವುದು, ಇನ್ನು ತಗ್ಗಿನ ಮನೆ ಎಂದು ದಲಿತರ

ಮನೆಗಳು. ಇಲ್ಲಿ ಯಾವಾಗಲೂ ಹಸಿವು, ಬಡತನ, ಶೋಷಣೆ, ಕ್ರೌರ್ಯ, ಅಳು ಮುಂತಾದ ದಲಿತರ ಜೀವನ ವಿಧಾನಗಳನ್ನು ಇದರ ಮೂಲಕ ತೋರಿಸುತ್ತಾರೆ. ಈ ಎರಡು ಮನೆಗಳಿಗೂ ಇರುವ ಸಂಬಂಧಗಳೇನು, ಯಾಕೆ ಇವು ವೈರುಧ್ಯಗಳಿಂದ ಕೂಡಿವೆ ಎಂದು ವಾಸ್ತವಿಕತೆಯ ತಳಹದಿಯ ಮೇಲೆ ನಿಂತು ಲೇಖಕರು ಗುರುತಿಸುತ್ತಾ ಹೋಗುತ್ತಾರೆ. ಅವರ ತಗ್ಗಿನ ಮನೆಗಳ ಜನ ಎಷ್ಟೇ ಶೋಷಣೆಗೆ ಒಳಗಾದರೂ ಸಹಿತ ಅವರಲ್ಲಿ ಕ್ರೌರ್ಯ, ಹಿಂಸೆ, ರಕ್ತಪಾತಗಳು ಕಂಡುಬರುವುದಿಲ್ಲ. ಅವರಿಗೂ ಸಹಿತ ಜೀವವಿದೆ ಅವರು ಮನುಷ್ಯರು ಎಂದು ಮೊಗಳ್ಳಿಯವರು ದಲಿತರ ಬದುಕನ್ನು ಕಷ್ಟದಲ್ಲಿಯೂ ಸಹಿತ ನಗು, ಹಬ್ಬ, ಹರಿದಿನಗಳಿಂದ ಕೂಡಿದ ಸಂಭ್ರಮದಲ್ಲಿ ಚಿತ್ರಿಸುತ್ತಾ ಹೋಗುತ್ತಾರೆ.

ಮೊಗಳ್ಳಿಯವರು ತಮ್ಮ ಹಲವಾರು ಕಥನಗಳನ್ನು ಅವರ ಅನುಭವದ ಆಳದಿಂದ ಕಟ್ಟಿಕೊಡುತ್ತಾ ಬರುತ್ತಾರೆ. ಅವರು ಸ್ವತಃ ಅನುಭವಿಸಿ ಅವುಗಳ ಆಳಕ್ಕೆ ಇಳಿದು ಅವುಗಳನ್ನು ಕಥನ ರೂಪದಲ್ಲಿ ತಂದಿರುವುದು ತಿಳಿದುಬರುತ್ತದೆ. ಅವರು ಚಿಕ್ಕವರಿಂದ ಹಿಡಿದು ಇಲ್ಲಿಯವರಿಗೂ ಅವರ ಅನುಭವಕ್ಕೆ ಬಂದಿರುವ ಅನುಭವಗಳೆ ಇಲ್ಲಿ ಮೂಡಿ ಬಂದಿವೆ. ದಲಿತ ದಲಿತೇತರರ ವ್ಯವಸ್ಥೆಯ ವಿಕೃತಿಗಳನ್ನು ಒಂದು ಮಲದ ಗುಂಡಿಗೆ ಹೋಲಿಸುತ್ತಾರೆ. ಅದೆ ತರಹ ಹಳೆ ಚಡ್ಡಿ, ತಣಿಗೆ ಮುಂತಾದ ಪ್ರತಿಮೆಗಳನ್ನು ಬಳಸಿ ದಲಿತರ ನಿಜವಾದ ಬದುಕನ್ನು ಅನಾವರಣಗೊಳಿಸುತ್ತಾರೆ. ಇದು ಅವರ ಅನುಭವದ ಆಳದಿಂದ ಬಂದಿರುವುದು ಎಂದು ತಿಳಿದು ಬರುತ್ತದೆ.

ಮೊಗಳ್ಳಿಯವರ ಕಥನಗಳ ಭಾಷೆ ಕೆಲವೊಂದು ಸಂದರ್ಭದಲ್ಲಿ ತುಂಬಾ ಉನ್ನತವಾದ ಭಾಷೆಯನ್ನು ಬಳಸಿರುವ ಹಾಗೆ ಕಂಡುಬರುತ್ತದೆ. ಇನ್ನು ಕೆಲವೆಡೆ ಸಾಮಾನ್ಯವಾಗಿ ದಲಿತರ ಅಂತರಂಗದಿಂದ ಚಿಮ್ಮಿದ ಹಾಗೆ ಬಳಸಿಕೊಂಡು ಬರುತ್ತಾರೆ. ಆದರೂ ಸಹಿತ ಅವರು ಇನ್ನುಳಿದ ದಲಿತ ಲೇಖಕರು ಬಳಿಸಿದ ಭಾಷೆಯ ಹಾಗೆ ದಲಿತ ಭಾಷೆಯನ್ನು ಬಳಸದೆ ಸಾಮಾನ್ಯವಾದ ಎಲ್ಲರೂ ಮಾತನಾಡುವ ಭಾಷೆಯನ್ನು ಬಳಸಿಕೊಂಡು ಬರುತ್ತಾರೆ.

ಮೊಗಳ್ಳಿಯವರ ಕಥನ ಶೈಲಿ ತುಂಬಾ ವಿಶಿಷ್ಟವಾಗಿರುವುದು ಅವರು ಪ್ರಸ್ತುತ ದಲಿತ ಲೋಕವನ್ನು ತೆರೆದಿಡಬೇಕಾದರೆ ಮಾಂತ್ರಿಕ ಮತ್ತು ಪರಂಪರೆಯ ಕಥನಕ್ರಮದ ನಿರೂಪಣೆಯನ್ನು ಅಳವಡಿಸಿಕೊಂಡಿರುವುದರಿಂದಾಗಿದೆ. ಅವರಿಗೇ ಮಾತ್ರ ಸಾಧ್ಯವಾದ ವಿಶಿಷ್ಟ ಶೈಲಿಯಿಂದ ಮತ್ತು ಕಥನ ತಂತ್ರಗಳಿಂದ ದಲಿತ ಲೋಕವನ್ನು ಅನಾವರಣ ಮಾಡುತ್ತಾರೆ. ಅಲ್ಲದೆ ಮೊಗಳ್ಳಿಯವರು ತಮ್ಮ ಕಥನಗಳಲ್ಲಿ ಒಂದು ಸುಪ್ತ ಪಾತ್ರವಾಗಿ ಕಥೆಯನ್ನು ನಿರೂಪಿಸುತ್ತಾ ಹೋಗುತ್ತಾರೆ. ಅವರು ದಲಿತರ ಮತ್ತು ಮೇಲ್ಜಾತಿಯವರ ಮಧ್ಯೆ ನಿಂತು ಕೊಡು ತೋರುಬೆರಳಾಗಿ ಅವರ ಅಸಮಾನತೆ ಮತ್ತು ತಾರತಮ್ಯಗಳನ್ನು ತೋರಿಸುತ್ತಾ ಹೋಗುತ್ತಾರೆ. ಅಷ್ಟೆ ಅಲ್ಲ ಅವರು ಇಲ್ಲಿಯ ಕಥನಗಳು ವಸ್ತುವಾಗಲಿ ಪಾತ್ರಗಳನ್ನಾಗಲಿ, ಕೆಲವು ಸನ್ನಿವೇಶ ಸಂದರ್ಭಗಳನ್ನು ಅಷ್ಟಾಗಿ ವರ್ಣನೆ ಮಾಡುವುದಿಲ್ಲ. ನೈಜವಾಗಿ ಅವುಗಳನ್ನು ಕಟ್ಟಿಕೊಡುತ್ತಾ ಹೋಗುತ್ತಾರೆ. ಇದು ಅವರ ವಾಸ್ತವಿಕ ಲೋಕವನ್ನು ಸ್ಪಷ್ಟವಾಗಿ ಅನಾವರಣ ಮಾಡುತ್ತಾ ಹೋಗುತ್ತದೆ.

ಮೊಗಳ್ಳಿಯವರ ಕಥನಗಳಲ್ಲಿಯ ಪಾತ್ರಗಳು ಕೇವಲ ದಲಿತ ಪಾತ್ರಗಳೆ ಆಗಿರದೆ ಅವು ಸಮಾಜದಲ್ಲಿರತ್ಕಂತಹ ಪ್ರತಿಯೊಂದು ವ್ಯಕ್ತಿತ್ವಗಳು ಅವರ ಕಥನಗಳಲ್ಲಿ ಚಿತ್ರಣಗೊಂಡಿವೆ. ಇಲ್ಲಿಯ ದಲಿತ ಪಾತ್ರಗಳು ದಲಿತರ ಜೀವನವನ್ನು ಸಂಪೂರ್ಣವಾಗಿ ಅನಾವರಣ ಮಾಡುತ್ತವೆ. ದಲಿತರ ಬಡತನ, ಹಸಿವಿನ ಕ್ರೂರತೆ, ಶೋಷಣೆ, ದಬ್ಬಾಳಿಕೆ ಮುಂತಾದ ದಲಿತರ ಬದುಕು ಈ ಪಾತ್ರಗಳಿಂದ ಪ್ರತಿಬಿಂಬಿತವಾಗುತ್ತದೆ. ಅವರ ಕಥನಗಳಲ್ಲಿಯ ಸ್ತ್ರೀ ಪಾತ್ರಗಳಷ್ಟೇ ಮೇಲ್ಜಾತಿಯ ಮತ್ತು ಕೆಳಜಾತಿಯ ಸ್ತ್ರೀ ಪಾತ್ರಗಳು ಇಲ್ಲಿ ಕಂಡುಬರುತ್ತವೆ. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅತ್ಯಂತ ಸಮರ್ಥವಾಗಿ, ಅಷ್ಟೇ ವೈವಿಧ್ಯತೆಯಿಂದ ಸ್ತ್ರೀ ಪಾತ್ರಗಳನ್ನು ಸೃಷ್ಟಿಸಿದ ಕೆಲವೇ ಲೇಖಕರಲ್ಲಿ ಮೊಗಳ್ಳಿಯವರೂ ಒಬ್ಬರೆಂದು ಹೇಳಬಹುದು.

ಮೊಗಳ್ಳಿಯವರ ಕಥನಗಳಲ್ಲಿ ಜನಪದ ಹಾಗೂ ಶಿಷ್ಟ ಸಂಸ್ಕೃತಿಯ ಆಶಯಗಳೆರಡೂ ಸಮರ್ಥವಾಗಿ ಕಥಾರೂಪ ಪಡೆದಿರುವುದು ಸಹಜವಾಗಿ ಕಂಡುಬರುತ್ತವೆ. ಕಥನಕಾರ ತಾನು ಪ್ರತಿನಿಧಿಸುವ ಸಮುದಾಯದ ಸಂಸ್ಕೃತಿಯ ಜೀವನಪ್ರೀತಿ ಮತ್ತು ಅದು ಹೊಂದಿರುವ ಮಾನವೀಯ ಅಂತಃಕರಣ, ಹೃದಯ ವೈಶಾಲ್ಯತೆಯನ್ನು ಯಾವುದೇ ಅಬ್ಬರ ಆರ್ಭಟಗಳಿಲ್ಲದೆ, ಹಿಂಸೆಯ ಅತಿರೇಕವಿಲ್ಲದೆ, ಘೋಷಣೆಗಳಿಲ್ಲದೆ ಕಲಾತ್ಮಕವಾಗಿ ಕಟ್ಟಿಕೊಡುತ್ತಾರೆ. ವರ್ತಮಾನವನ್ನು ಅರಿಯಲು ಭೂತಕಾಲದ ಅರಿವು ಅಗತ್ಯ ಎಂಬುದರ ಪ್ರತಿಪಾದನೆ ಎಂಬಂತೆ ಕಥನದ ಒಳವಿನ್ಯಾಸದಲ್ಲಿ ಸಾಮಾಜಿಕ ಸ್ತರವಿನ್ಯಾಸಗಳನ್ನು ಅತ್ಯಂತ ನೈಜವಾಗಿ ಚಿತ್ರಿಸುತ್ತಾರೆ. ಮನುಷ್ಯನ ಸಣ್ಣತನ, ಕ್ರೌರ್ಯ, ಅಸಹಾಯಕತೆ, ಜಾತೀಯತೆ ಮುಂತಾದ ಜೀವನ ಛಿದ್ರತೆಗಳನ್ನು ಪ್ರತಿಫಲಿಸುವ ಇವರ ಕಥನ ನಿಜವಾದ ದಲಿತತ್ವದ ಆಶಯಗಳನ್ನು ಒಳಗೊಂಡ ಕಥನವಾಗಿದೆ.

ಒಟ್ಟಾರೆಯಾಗಿ ಇವರು ವಾಸ್ತವತೆಯ ತಳಹದಿಯಲ್ಲಿ ನಿಂತು ವಿಶಾಲ ಭೂಮಿಕೆಯಲ್ಲಿ ರೂಪಕ, ಪ್ರತಿಮೆ, ಸಂಕೇತಗಳಲ್ಲಿ ಪ್ರಸ್ತುತಗೊಳಿಸುವ ಕಲಾತ್ಮಕತೆಯಲ್ಲಿ ಮೊಗಳ್ಳಿಯವರು ಎತ್ತಿದ ಕೈಯಾಗಿದ್ದಾರೆ. ಇವರ ಕತೆಗಳಲ್ಲಿ ತಾಯ್ತನದ ಹಂಬಲವನ್ನು ಕಾಣಲಾಗುತ್ತದೆ. ಇದರಿಂದ ಮೂಡಿ ಬಂದ ದಲಿತ ಬದುಕು ನಿಜವಾದ ಸ್ಪಷ್ಟವಾದ ಸ್ವತಃ ಅನುಭವದ ಮೂಲಕ ಮೂಡಿ ಬಂದ ಬದುಕಾಗಿ ಕಂಡುಬರುತ್ತದೆ.

ಒಂದು

## ಗ್ರಂಥ ಋಣ


೧. ಅರವಿಂದ ಮಾಲಗತ್ತಿ, ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್ತು, ೨೦೦೨.

೧. ಅರವಿಂದ ಮಾಲಗತ್ತಿ, ದಲಿತ ಮಾರ್ಗ, ಕನ್ನಡ ಪುಸ್ತಕಪ್ರಾಧಿಕಾರ ಬೆಂಗಳೂರು ೨೦೦೨.

೨. ಅರ್ಜುನ ಗೊಳಸಂಗಿ, ದಲಿತಪ್ರಜ್ಞೆ, ದಲಿತ ಸಾಹಿತ್ಯ ಪರಿಷತ್ತು ರಾಜಘರ್ಬ ೨೦೦೦, ಗದಗ.

೩. ಅರ್ಜುನ ಗೊಳಸಂಗಿ, ಕನ್ನಡ ದಲಿತ ಸಾಹಿತ್ಯಸಮಾಲೋಕನ, ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು ೨೦೦೩

೪. ಅಗ್ರಹಾರ ಕೃಷ್ಣಮೂರ್ತಿ ಸಂ. ಡಿ. ಆರ್ ನಾಗರೀಜ ಸಂಸ್ಕೃತಿಕಥನ, ಕನ್ನಡ ಪುಸ್ತಕ ಪ್ರಾಧಿಕಾರ.

೫. ಆಮೂರ ಜಿ.ಎಸ್. ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು, ೨೦೦೩.

೬. ಅಮೂರ ಜಿ.ಎಸ್. ಕನ್ನಡ ಕಥನ ಸಾಹಿತ್ಯ ಕಾದಂಬರಿ, ಶ್ರೀಹರಿ ಪ್ರಕಾಶನ ಧಾರವಾಡ ೧೯೯೪.

೭. ಅಮೂರ ಜಿ.ಎಸ್. ಕನ್ನಡ ಶಾಸ್ತ್ರ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ೨೦೦೧.

೮. ಗೋವಿಂದರಾಜ ಗಿರಡ್ಡಿ, ಸಣ್ಣಕಥೆಯ ಹೊಸ ಒಲವುಗಳು ೧೯೭೮.

೯. ಧರಣೀದೇವಿ ಮಾಲಗತ್ತಿ, ಸ್ತ್ರೀವಾದ ಮತ್ತು ಭಾರತೀಯತೆ ಚೇತನ ಬುಕ್ ಹೌಸ್ ಮೈಸೂರು ೧೯೯೮.

೧೦. ದೇವಯ್ಯ ಹರವೆ, ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು. ೧೯೯೧.

೧೧. ದುರ್ಗಾದಾಸ್ ಕೆ.ಆರ್. ಮೂರು ದಲಿತ ಕಮ್ಮಟಗಳು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು. ೧೯೯೬.

೧೨. ನಾಗರಾಜ ಡಿ.ಆರ್. ಸಾಹಿತ್ಯ ಕಥನ, ಅಕ್ಷರ ಪ್ರಕಾಶನ ಸಾಗರ ೧೯೯೬.

೧೩. ನಾಗರಾಜ ಡಿ.ಆರ್. ಅಮೃತ ಮತ್ತು ಗರುಡ, ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ ೧೯೯೮.

೧೪. ನಾಗರಾಜ ಡಿ.ಆರ್. ಶಕ್ತಿ ಶಾರದೆಯಮೇಳ, ಅಕ್ಷರ ಪ್ರಕಾಶನ ಸಾಗರ ೧೯೯೮.

೧೫. ನಾಗಭೂಷಣ ಸ್ವಾಮಿ ಒ.ಎಲ್. ವಿಮರ್ಶೆಯ ಪರಿಭಾಷೆ, ಅಂಕಿತ ಪುಸ್ತಕ ಬೆಂಗಳೂರು ೧೯೯೧.

೧೬. ಪುರುಷೋತ್ತಮ ಬಿಳಿಮಲೆ ದಲಿತ ಜಗತ್ತು, ಹೊಸದಿಕ್ಕು ಪ್ರಕಾಶನ ಬೆಂಗಳೂರು ೧೯೮೯.

೧೭. ಪುಟ್ಟಯ್ಯ ಬಿ.ಎಂ. ಕನ್ನಡ ದಲಿತ ಸಾಹಿತ್ಯ ಮತ್ತು ಪ್ರತಿಸಂಸ್ಕೃತಿ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ ಅಪ್ರಕಟಿತ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭.

೧೮. ಭೂಮಿಗೌಡ, ಕನ್ನಡ ಕಾದಂಬರಿಗಳಲ್ಲಿ, ದಲಿತ ಜಗತ್ತು, ಚೇತನ್ ಬುಕ್ ಹೌಸ್ ಮೈಸೂರು ೨೦೦೪.

೧೯. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೯.

೨೦. ಮೊಗಳ್ಳಿ ಗಣೇಶ್ ದಲಿತ ಚಿಂತನೆ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨.

೨೧. ಮೊಗಳ್ಳಿ ಗಣೇಶ್ ಬುಗುರಿ ಕಥೆಗಳು ಪತ್ರಿಕೆ ಪ್ರಕಾಶನ ಬೆಂಗಳೂರು ೧೯೯೨.

೨೨. ಮೊಗಳ್ಳಿ ಗಣೇಶ್ ಅತ್ತೆ ಕಥೆಗಳು ವಿಶ್ವಾಲಯ ಪ್ರಾಕ್ಸಿಸ್ ಸಹಯೋಗದೊಂದಿಗೆ. ೧೯೯೭.

೨೩. ಮೊಗಳ್ಳಿ ಗಣೇಶ್ ಮಣ್ಣು ಕತೆಗಳು ಸಪ್ನ ಬುಕ್ ಹೌಸ್ ಬೆಂಗಳೂರು, ೨೦೦೫.

೨೪. ಮೊಗಳ್ಳಿ ಗಣೇಶ್ ಭೂಮಿ ಕತೆಗಳು ಪ್ರಿಸಮ್ ಬುಕ್ ಪ್ರೈ.ಲಿ. ಬೆಂಗಳೂರು, ೨೦೦೧.

೨೫. ಮೊಗಳ್ಳಿ ಗಣೇಶ್ ಅನಾದಿ ಕಾದಂಬರಿ

೨೬. ಮೊಗಳ್ಳಿ ಗಣೇಶ್ ಕಿರೀಟ ಕಾದಂಬರಿ

೨೭. ಮೊಗಳ್ಳಿ ಗಣೇಶ್ ತೊಟ್ಟಿಲು ಕಾದಂಬರಿ

೨೮. ಮುನಿ ವೆಂಕಟಪ್ಪ ದಲಿತ ಚಳುವಳಿ ಒಂದು ಅವಲೋಕನ ವಿಚಾರವಾದಿ ಪ್ರಕಾಶನ ಮೈಸೂರು, ೧೯೯೮.

೨೯. ಮೋಹನ ಕೃಷ್ಣ ರೈ.ಕೆ. ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ೨೦೦೪.

೩೦. ರಹಮತ್ ತರೀಕೆರೆ, ಪ್ರತಿ ಸಂಸ್ಕೃತಿ ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್ ಮೈಸೂರು ೨೦೦೨.

೩೧. ರಹಮತ್ ತರೀಕೆರೆ, ಮಾತು ತಲೆಯೆತ್ತುವ ಬಗೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫.

೩೨. ರಾಮಚಂದ್ರಪ್ಪ ಬರಗೂರು, ಸಂಸ್ಕೃತಿ ಮತ್ತು ಸೃಜನಶೀಲತೆ, ಅಂಕಿತ ಪ್ರಕಾಶನ ಬೆಂಗಳೂರು ೧೯೮೭.

೩೩. ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ನೆಲೆಗಳು, ಎಸ್. ಎಲ್. ಪ್ರಭಾವತಿ, ಅಂಕಿ ಪ್ರಕಾಶನ, ಬೆಂಗಳೂರು

೩೪. ಶೇಷಗಿರಿರಾವ್. ಎಲ್.ಎಸ್. ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ ಪ್ರಕಾಶನ ಬೆಂಗಳೂರು, ೨೦೦೨.

೩೫. ಹನುಮಂತಯ್ಯ ಎಲ್. ಕಥಾಕಥನ ಬಂಡಾಯಕಥೆಗಳಲ್ಲಿ ದಲಿತ ಪ್ರಜ್ಞೆ ಸಿ.ವಿ.ಜಿ ಬೆಂಗಳೂರು, ೧೯೯೯.

೩೬. ಹೊನ್ನಯ್ಯ .ಸಿ.ಬಿ. ಕನ್ನಡ ಸಣ್ಣಕತೆಗಳಲ್ಲಿ ದಲಿತ ಸಂಸ್ಕೃತಿ ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್ ಬೆಂಗಳೂರು, ೨೦೦೪.

೩೭. ಹನುಮಂತಯ್ಯ ಎಲ್. ದಲಿತ ಲೋಕದ ಒಳಗೆ, ಕರ್ನಾಟಕ ದಲಿತ ಪ್ರಕಾಶನ ಬೆಂಗಳೂರು, ೧೯೯೦.

೩೮. ಹಿರೀಮಠ ಎಸ್.ಎಸ್. ದಲಿತ ಸಂಸ್ಕೃತಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೧.

# ಎರಡು

## ಸಂದರ್ಶನ

**ಸಂಶೋಧಕಿ: ಕ್ಷಮಿಸಿ. ಎಲ್ಲ ಲೇಖಕರಿಗೂ ಕೇಳುವ ಒಂದು ಸಾಮಾನ್ಯ ಪ್ರಶ್ನೆ. ನಿಮ್ಮ ಸಾಹಿತ್ಯ ರಚನೆಯ ಹಿಂದಿನ ಪ್ರೇರಣೆ ಕುರಿತು ವಿವರಿಸುತ್ತೀರಾ.**

**ಮೊಗಳ್ಳಿ:** ನಾನು ಬಾಲಕನಾಗಿದ್ದಾಗಿನಿಂದಲೂ ನಮ್ಮ ಮನೆಯ ವಾತಾವರಣದಲ್ಲಿಯೇ ನನಗೆ ಕಥೆಗಳ ಕುರಿತಾಗಿ ಆಸಕ್ತಿ ಇತ್ತು. ನಮ್ಮಜ್ಜ ಅದ್ಭುತವಾಗಿ ಕತೆ ಹೇಳುತ್ತಿದ್ದ. ನಾನು ಚಿಕ್ಕವನಿರುವಾಗಲೇ ನಮ್ಮ ತಾಯಿ ತೀರಿ ಹೋಗಿದ್ದಳು. ನನ್ನ ತಬ್ಬಲಿತನದಿಂದ ಪಾರಾಗಲು ನನ್ನಜ್ಜ ಹೇಳುತ್ತಿದ ಅದ್ಭುತ ರಮ್ಯ ಕಿನ್ನರಲೋಕದ ಕಥೆಗಳು ನನ್ನನ್ನು ಅಂತಹ ತಬ್ಬಲಿತನದಿಂದ ಪಾರು ಮಾಡಿ ನನಗೆ ತಾಯ್ತನದ ತಂಪೆರೆದವು.... ಇರಲಿ. ನನ್ನ ಬಾಲ್ಯದ ಕುರಿತು ನಿಮಗೆ ಮುಂದೆ ಹೇಳುತ್ತೇನೆ. ಪ್ರಸ್ತುತ ಈ ಪ್ರಶ್ನೆಗೇ ಸಾವು ಮರಳೋಣ. ನಾನು ಉನ್ನತ ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ಬಂದ ಹೊಸತರಲ್ಲಿ ಜಗತ್ತಿನ ಬೇರೆ ಬೇರೆ ಭಾಷೆಗಳ ಮಹಾನ್ ಲೇಖಕರ ಕೃತಿಗಳನ್ನು ಆಸಕ್ತಿಯಿಂದ ಓದಲು ಪ್ರಾರಂಭಿಸಿದೆ. ನಾನು ಬಿ. ಎ. ಓದುವಾಗ ಕನ್ನಡ ಪಠ್ಯಕ್ರಮದಲ್ಲಿ ಚಿತ್ತಾಲ, ತೇಜಸ್ವಿಯವರ ಕಥೆಗಳನ್ನು ಓದಿದ್ದನ್ನು ಬಿಟ್ಟರೆ ಉಳಿದಂತೆ ನನಗೆ ಕನ್ನಡ ಸಾಹಿತ್ಯವೇ ಅಪರಿಚಿತವಾಗಿತ್ತು. ನೀವು ನಂಬುತ್ತೀರೋ ಬಿಡುತ್ತೀರೋ ಗೊತ್ತಿಲ್ಲ. ನನ್ನ ಮೊದಲ ಕಥೆ ಒಂದು ಹಳೆಯ ಚಡ್ಡಿ ಪ್ರಕಟಗೊಂಡಾಗ ನನಗಿನ್ನೂ ಕನ್ನಡ ಸಾಹಿತ್ಯ ಜಗತ್ತು ಅಷ್ಟಾಗಿ ತಿಳಿದಿರಲೇ ಇಲ್ಲ. ನಾನು ಸಾಹಿತ್ಯ ಜಗತ್ತಿಗೆ ಪ್ರವೇಶಿಸಿದ್ದೇ ಒಂದು ಆಕಸ್ಮಿಕ. ಮೊದಮೊದಲು ನಾನು ಓದಿದ ಕಥೆ ಕಾದಂಬರಿಗಳಿಂದ ನಾನೂ ಏಕೆ ಕಥೆ ಬರೆಯಬಾರದೆಂಬ ಯೋಚನೆ ಬಂತು. ನಾನು ನನ್ನ ಬಾಲ್ಯದಲ್ಲಿ ನನ್ನ ಬಾಲ್ಯದ ಕಠೋರತೆಯನ್ನು, ಅಪ್ಪನ ಹಿಂಸೆಯನ್ನು, ತಬ್ಬಲಿತನವನ್ನು ಮೀರಲು ನನ್ನ ತಾತ ಹೇಳುತ್ತಿದ್ದ ಕಥೆಗಳು ನೆರವಾದವೆಂದು ನಿಮಗೆ ಹೀಗಾಗಲೆ ಹೇಳಿದ್ದೆನಲ್ಲ. ಹಾಗೆಯೇ ಎಂದೂ ಮರೆಯಲಾಗದ ಅಪ್ಪನ ಕ್ರೌರ್ಯವನ್ನು, ಅಂತಹುದೇ ನನ್ನ ಸುತ್ತಣದ ಕ್ರೌರ್ಯದ ಜಗತ್ತಿನ ಕುರಿತಾಗಿ ನನ್ನೊಳಗೆ ಉಂಟಾಗುವ ನನ್ನ ಪ್ರತಿಕ್ರಿಯೆಗಳನ್ನು ಹೊರಹಾಕುವ ಒತ್ತಡಗಳಿಗೆ ಒಳಗಾಗಿದ್ದೆ. ನಾನು ಪಡುತ್ತಿದ್ದ ಹಿಂಸೆಯಿಂದ ಪಾರಾಗಲು ಇದು ಅನಿವಾರ್ಯವಾದ ಮಾರ್ಗವಾಗಿತ್ತು. ನಾನು ಎಂ. ಎ. ಮುಗಿಸಿ ಸಂಶೋಧನಾ ವಿದ್ಯಾರ್ಥಿಯಾಗಿದ್ದಾಗ ಗಂಗೋತ್ರಿಯ ಹಾಸ್ಟೆಲ್‌ನ ನನ್ನ ಕೋಣೆಯಲ್ಲಿ ಹೀಗೆ ಒಂದು ದಿನ ಒಂದು ಹಳೆಯ ಚಡ್ಡಿ ಎನ್ನುವ ಕತೆ ಬರೆದೆ. ಈ ಕತೆಯನ್ನು ಬರೆದದ್ದೂ ಒಂದು ಆಕಸ್ಮಿಕ. ಹಾಗೆಯೆ ಅದು ಪ್ರಕಟಗೊಂಡದ್ದೂ ಆಕಸ್ಮಿಕವೇ.

ನಾನಂದು ತುಂಬಾ ದುಃಖದಲ್ಲಿದ್ದೆ. ಅಂತಹ ದುಃಖದಿಂದ ಪಾರಾಗಲು ಹಾಸ್ಟೆಲ್‌ನ ನನ್ನ ಕೋಣೆಯ ಬಾಗಿಲನ್ನು ಹಾಕಿಕೊಂಡು ಕಥೆ ಬರೆಯಲು ಆರಂಬಿಸಿದೆ. ಆ ಕಥೆಯಲ್ಲಿ ಬರುವ ಬಾಲಕನ ಪಾತ್ರ ನನ್ನದೇ

ಆಗಿತ್ತು. ಬಹುತೇಕ ಆ ಕಥೆಯಲ್ಲಿನ ಪಾತ್ರಗಳ ಹೆಸರುಗಳೆಲ್ಲಾ ನಿಜವಾದವೇ. ಆ ಕಥೆಯಲ್ಲಿ ಬರುವ ಬಾಲಕ ಅಪಘಾತದಲ್ಲಿ ದುರಂತ ಸಾವನ್ನಪ್ಪುವ ಘಟನೆ ಬರುತ್ತದೆ. ಆ ಪಾತ್ರ ಬೇರಾರದೂ ಅಲ್ಲ. ನನ್ನದೇ. ಕಥೆಯನ್ನು ಆ ಹಂತಕ್ಕೆ ತಂದು ನಿಲ್ಲಿಸಿದ್ದಾಗ ನನಗೆ ದುಃಖ ತಡೆಯಲಾಗಲಿಲ್ಲ. ನನ್ನ ಕಣ್ಣುಗಳಿಂದ ನೀರು ಸುರಿಯುತ್ತಿತ್ತು. ನಿಜವಾಗಿ ಇಲ್ಲಿಂದಲೇ ಈ ಕಥೆ ಆರಂಭಗೊಳ್ಳುತ್ತದೆ ಎಂದು ಭಾವಿಸಿದ್ದೆ. ಅದೇ ಕ್ಷಣಕ್ಕೆ ನನ್ನ ಸ್ನೇಹಿತರು ಬಾಗಿಲು ತಟ್ಟಿದರು. ನಾನು ಕಣ್ಣೀರು ಒರೆಸಿಕೊಂಡು ಏನೂ ಆಗಿಲ್ಲದವನಂತೆ ನಟಿಸುತ್ತಾ ಬಾಗಿಲು ತೆರೆದೆ. ಹಾಗೆ ಬಂದ ಸ್ನೇಹಿತರಲ್ಲಿ ರಾಜಪ್ಪದಳಾಯಿ ಒಬ್ಬರು. ಕಾಫಿ ಕುಡಿಯೋಕೆ ಹೋಗೋಣ ಬಾರಯ್ಯಾ ಎಂದು ಕರೆಯಲು ಬಂದವರು ನನ್ನ ಟೇಬಲ್ಲಿನ ಮೇಲಿರುವ ಹಾಳೆಗಳನ್ನು ನೋಡಿದರು. ಓಹೋ ಏನೋ ಬರೆದಿದ್ದಂಗಿದೀಯಲ್ಲಾ... ಏನ್ ಕತೆಗಿತೆ ಬರ್ದ್ಯೇನೋ... ಎಂದು ರಾಜಪ್ಪ ದಳವಾಯಿ ತಮಾಷೆ ಮಾಡುತ್ತಾ ಆ ಹಸ್ತಪ್ರತಿಯ ಮೇಲಿರುವ ಶೀರ್ಷಿಕೆಯನ್ನು ನೋಡಿ ಜೋರಾಗಿ ನಗಾಡಿ 'ಓಹೋ... ಒಂದು ಹಳೆಯ ಚಡ್ಡಿ. ಇದೇನೊ ಈ ಹೆಸರು' ಎಂದು ಗೇಲಿ ಮಾಡಿ ನಗಾಡಿದರು. ಅದೇ ಗೇಲಿಯಿಂದಲೇ ಓದತೊಡಗಿದ ರಾಜಪ್ಪ ಅದೇನೊ ತಮಾಷೆಯೆಂಬಂತೆ 'ಇರಿ ಇರಿ ಇದನ್ನು ಓದಿಯೇ ಕಾಫಿಗೆ ಹೋದರಾಯ್ತೆಂದು' ಅಲ್ಲಿದ್ದವರಿಗೆಲ್ಲಾ ಕೇಳಿಸುವಂತೆ ಓದತೊಡಗಿದ. ಕಥೆಯ ಕೊನೆಯ ಹಂತಕ್ಕೆ ಬಂದಾಗ ಎಲ್ಲರೂ ಡಿಸ್ಟರ್ಬ್ ಆಗಿದ್ದರು. 'ನಿಜವಾಗಲೂ ಚೆನ್ನಾಗಿದೆ ಕಣೋ. ಕತೆ ಬರೆಯೋದಂದ್ರೆ ಇಷ್ಟೇ' ಎಂದ ರಾಜಪ್ಪ. ಇಲ್ಲ ಇಲ್ಲ ಚಲುವನ ಸಾವಿನ ನಂತರವಷ್ಟೆ ಆ ಕತೆ ಆರಂಭವಾಗುವುದು' ಎಂದೆ ನಾನು. 'ಇಲ್ಲಾ ಇಲ್ಲಿಗೇ ಕಥೆ ಮುಗಿಯಿತು. ಕಥೆ ಬರೆಯೋದಂದ್ರೆ ಏನಂದ್ಕೊಂಡಿದೀಯಾ. ಇಷ್ಟೆ. ಹಿಂಗೇನೆ ಬರೆಯೋದು. ಆಯ್ತು ಇದನ್ನು ನನಗೆ ಕೊಟ್ಟು ಬಿಡು' ಎಂದ ರಾಜಪ್ಪ.

ನನಗೆ ನಂತರ ಆ ಸಂಗತಿಯೇ ಮರೆತು ಹೋಗಿತ್ತು. ನಂತರ ಹಲವು ದಿನಗಳ ನಂತರ ನನ್ನ ಹಾಸ್ಟೆಲ್‌ಮೇಟ್ ಒಬ್ಬರು 'ಏನ್ರೀ ನೀವು ಕತೆ ಬರೀತೀರಾ, ನನ್ಗೆ ಗೊತ್ತೇ ಇರಲಿಲ್‌ವಲ್ರೀ' ಎಂದ. ನಾನು ಇಲ್ಲವೆಂದೆ. ಸುಳ್ಳು ಹೇಳ್ತಾ ಇದೀರಿ ಎಂದು ಪ್ರಜಾವಾಣಿ ದೀಪಾವಳಿ ವಿಶೇಷಾಂಕವನ್ನು ನನ್ನೆದುರಿಗಿಡಿದ. ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಯಿತು. ಹೌದು ಯಾವಾಗಲೋ ಕಳಿಸಿದ್ದೆ ಮರೆತು ಹೋಗಿತ್ತು ಎಂದೆ. ಪ್ರಜಾವಾಣಿ ದೀಪಾವಳಿ ವಿಶೇಷಾಂಕದಲ್ಲಿ ನನ್ನ ಆ ಕಥೆಗೆ ಮೊದಲ ಬಹುಮಾನ ಬಂದಿತ್ತು. ಅಂದು ರಾಜಪ್ಪ ಕಥೆಯ ಹಸ್ತಪ್ರತಿ ಒಯ್ದವನು ಅದನ್ನು ತನ್ನ ಹೆಸರಿನಲ್ಲಿಯೇ ಪ್ರಕಟಿಸಿಕೊಳ್ಳುತ್ತಾನೆಂದು ಕೊಂಡಿದ್ದೆ. ಒಂದು ವೇಳೆ ಹಾಗೆ ಮಾಡಿದ್ದರೂ ನನಗೆ ಬೇಜಾರಾಗುತ್ತಿರಲಿಲ್ಲ. ಇಂತವನ್ನು ಸಾವಿರ ಬೇಕಾದರೂ ಬರೆಯಬಲ್ಲೆ ಎಂಬ ಉಪೇಕ್ಷೆ ನಿರ್ಲಕ್ಷ್ಯಗಳಿಂದಲೇ ಅವತ್ತು ರಾಜಪ್ಪ ದಳವಾಯಿಗೆ ಆ ಹಸ್ತಪ್ರತಿಯನ್ನು ಕೊಟ್ಟಿದ್ದೆ. ಅವರು ಆ ಕಥೆಯನ್ನು ಪ್ರಜಾವಾಣಿಯ ಕಥಾಸ್ಪರ್ಧೆಗೆ ಕಳಿಸಿರುವ ಸಂಗತಿಯಾಗಲಿ, ಅದಕ್ಕೆ ಬಹುಮಾನ ಬಂದಿರುವ ಸಂಗತಿಯಾಗಲಿ ನನಗೆ ತಿಳಿದಿರಲೇ ಇಲ್ಲ. ಅದನ್ನು ರಾಜಪ್ಪನೇ ತನ್ನ ಹೆಸರಲ್ಲಿ ಪ್ರಕಟಿಸಿಕೊಳ್ಳುತ್ತಾನೆಂದುಕೊಂಡಿದ್ದೆ.

ಹೀಗೆ ಬರೆಯಲು ಆರಂಭಿಸಿದ ನನಗೆ ಪ್ರೇರಣೆಯೆಂದರೆ ಅದು ನನ್ನ ಬಾಲ್ಯದ ಪರಿಸರ. ಮೊದಲೇ ಹೇಳಿದ ಹಾಗೆ ಅದ್ಭುತ ಕಥೆಗಾರನಾಗಿದ್ದ ನನ್ನಜ್ಜನ ಪ್ರಭಾವ. ನನ್ನ ಬಾಲ್ಯದ ಕಠೋರ ವಾಸ್ತವ. ನನ್ನ ಚಿಕ್ಕಂದಿನಲ್ಲೆ ತಾಯಿ ತೀರಿಹೋಗಿದ್ದಳು. ನನ್ನ ತಬ್ಬಲಿತನಕ್ಕೆ ಸಾಂತ್ವನ ನೀಡುವ ತಾಯ್ತನದ ಅಕ್ಕರೆಯ ಜೋಗುಳಗಳಾಗಿದ್ದವು ನನ್ನ ತಾತ ಹೇಳುತ್ತಿದ್ದ ಕಥೆಗಳು. ನನ್ನ ತಾತ ಮಾತ್ರ ಕತೆ ಹೇಳುತ್ತಿರಲಿಲ್ಲ. ಬಹುತೇಕ ಮನೆಯ ಎಲ್ಲ ಹಿರಿಯ ಸದಸ್ಯರೂ ಕತೆ ಹೇಳುತ್ತಿದ್ದರು. ಅದೊಂದು ಸಂಪ್ರದಾಯವೇ ಆಗಿತ್ತು. ನನ್ನನ್ನು ಹೊರತು ಪಡಿಸಿದರೆ ಉಳಿದವರಾರಿಗೂ ಆ ಕುರಿತ ಅಂತಹ ಆಸಕ್ತಿಯೇನೂ ಇರಲಿಲ್ಲ. ಕಥೆ ಹೇಳುವ ಮತ್ತು ಕೇಳುವ ಆ ಕ್ರಮವು

ನಿತ್ಯದ ಉಪದ್ವ್ಯಾಪವಾಗಿತ್ತು. ಆದರೆ ಆ ಕಥೆಗಳು ನನ್ನಲ್ಲುಂಟು ಮಾಡುತ್ತಿದ್ದಂಥ ಪರಿಣಾಮ ಮಾತ್ರ ಅಗಾಧವಾಗಿತ್ತು. ಅದ್ಭುತ ರಮ್ಯ ಕಥೆಗಳ ಮಾಯಾ ಲೋಕ ನನ್ನಲ್ಲಿ ಪುನರ್‌ಸೃಷ್ಟಿಗೊಳ್ಳುತ್ತಿತ್ತು. ನಾನು ಕಿನ್ನರ ಲೋಕದಲ್ಲಿ ವಿಹರಿಸುತ್ತಿದ್ದೆ. ಅಪ್ಪನ ಕ್ರೌರ್ಯ, ಹಿಂಸೆಯಿಂದ ಪಾರಾಗುವ ತಾಯ್ತನದ ಅಕ್ಕರೆಯನ್ನು ಒದಗಿಸುವಲ್ಲಿ ನನ್ನ ಬಾಲ್ಯದ ಈ ಕಥಾ ಜಗತ್ತು ನನಗೆ ನೆರವಾಯಿತು. ಹಾಗೆಯೇ ಈ ಕಥೆಗಳ ಮಾಯಾಲೋಕದೊಂದಿಗೆ ನಾನು ಒಂಟಿಯಾಗಿ ಊರ ಹೊರಗಿನ ತೊರೆ, ಮರಗಳ ಗುಂಪಿನ ಮಧ್ಯೆ ಮರವೊಂದನ್ನು ಹತ್ತಿ ತೊರೆಯನ್ನು ಗಮನಿಸುತ್ತಾ ಏಕಾಂಗಿಯಾಗಿ ಗಂಟೆಗಟ್ಟಲೆ ಕಾಲ ಕಳೆಯುತ್ತಿದ್ದೆ. ವಿಶೇಷವಾಗಿ ತಾತನ ಕಥಾ ಜಗತ್ತು ಮತ್ತು ನನ್ನ ತೊರೆ, ತೊರೆಯನ್ನಾವರಿಸಿದ ಮರಗಳ ಗುಂಪು ನನ್ನ ಭಾವಕೋಶದಲ್ಲಿ ಸದಾ ಜೀವಂತವಾಗಿದೆ.

**ಸಂಶೋಧಕಿ: ನೀವು ನಿಮ್ಮ ಬಾಲ್ಯದ ಹಿಂಸೆಯ ಕುರಿತು ಹೇಳಿದಿರಿ. ಅಂತಹ ಸಂದರ್ಭಗಳಲ್ಲಿ ನೀವು ಪ್ರತಿಭಟಿಸುತ್ತಿರಲಿಲ್ಲವೆ.**

**ಮೊಗಳ್ಳಿ:** ಇಲ್ಲ. ಮೌನವಾಗಿ ಸಹಿಸಿಕೊಳ್ಳುತ್ತಿದ್ದೆ. ಅಪ್ಪನ ಕ್ರೌರ್ಯ ಭೀಕರವಾಗಿತ್ತು. ನಾನು ಮೊದಲೇ ಹೇಳಿದಂತೆ ನಾನಾಗ ಐದನೆಯ ತರಗತಿಯಲ್ಲಿರಬಹುದು... ನನ್ನ ತಾಯಿ ಈ ಅಪ್ಪನ ಹಿಂಸೆಯಿಂದಲೇ ತೀರಿಕೊಂಡಿದ್ದಳು. ಮಲತಾಯಿ ಇದ್ದಳು. ಅಪ್ಪ ಎಲ್ಲರ ಮೇಲೂ ವ್ಯಗ್ರನಾಗಿರುತ್ತಿದ್ದ. ಅವನು ಮನೆಗೆ ಬಂದನೆಂದರೆ ಸಾಕು ಎಲ್ಲರೂ ಅಡಗಿಕೊಳ್ಳುತ್ತಿದ್ದರು. ಅಪ್ಪನ ಹೆಜ್ಜೆ ಸಪ್ಪಳವೇ ನನ್ನಲ್ಲಿ ಭೀತಿಯನ್ನು ಹುಟ್ಟಿಸುತ್ತಿತು. ಅವನ ನೆರಳೂ ಸಹ ನನ್ನಲ್ಲಿ ಪ್ರಕಂಪನಗಳನ್ನು ಸೃಷ್ಟಿಸುತ್ತಿತ್ತು.

ನಿಮಗೇ ಮೊದಲೇ ಹೇಳಿದಂತೆ ನಾನು ನನ್ನ ಓದಿನ ಮೂಲಕ ಕನ್ನಡ ಸಾಹಿತ್ಯವನ್ನೆ ಪ್ರವೇಶಿಸಿದ್ದೇ ಅನುವಾದಗಳ ಮೂಲಕ. ಜಗತ್ತಿನ ಬೇರೆ ಬೇರೆ ಭಾಷೆಗಳ ಮಹಾನ್ ಲೇಖಕರನ್ನು ಓದಿದ್ದು ಮೈಸೂರಿನಲ್ಲಿದ್ದಾಗ. ಬಿ. ಎ. ಓದುತ್ತಿದ್ದಾಗ. ಹಾಗೆ ನನ್ನ ಓದಿಗೆ ಸಿಕ್ಕಿದ್ದು ಕಾಫ್ಕಾ. ನನ್ನ ಬಾಲ್ಯದ ಅನುಭವ, ಅಪ್ಪನೊಂದಿಗಿನ ನನ್ನ ಸಂಬಂಧ ಕಾಫ್ಕಾನನ್ನು ಹತ್ತಿರವಾಗಿಸಿತು.

ನಿಮಗೆ ನನ್ನ ಬಾಲ್ಯದ ಕುರಿತು ಹೇಳುವುದು ಇನ್ನಷ್ಟಿದೆ. ಅಪ್ಪ ಹೊಡೆಯುವ ವಿಷಯವನ್ನು ನಿಮಗೆ ಹೇಳಿದ್ದೆನಲ್ಲವೆ. ನಾನು ಅಪ್ಪನ ಆ ಭಯಾನಕ ವಲಯದಿಂದ ಪಾರಾಗಲು ಕಾರಣವಾದದ್ದೇ ಅಪ್ಪನ ಆ ಹಿಂಸೆ. ಒಂದು ದಿವಸ ಏನಕ್ಕೋ ಬಹುಶಃ ಮಲತಾಯಿಯ ಚಾಡಿ ಮಾತಿನಿಂದಲೋ ಏನೋ ನನ್ನ ಮನೆಯ ಕೋಣೆಯೊಳಗಡೆ ಕೂಡಿ ಹಾಕಿ, ಕೈ ಕಾಲು ಕಟ್ಟಿ ಭಯಂಕರವಾಗಿ ಹೊಡೆಯತೊಡಗಿದ. ಜೊತೆಗೆ ಮೆಣಸಿನ ಕಾಯಿಯ ಹೊಗೆಯನ್ನೂ ಹಾಕಿದ. ಹೆಚ್ಚು ಕಡಿಮೆ ನಾನು ಸತ್ತೇ ಹೋಗಿದ್ದೆ. ಕೇರಿಯ ಅಪ್ಪನ ವಾರಿಗೆಯ ಅಪ್ಪನಿಗೆ ಆಪ್ತರಾಗಿರುವವರೊಬ್ಬರು ಬಂದು ಬಾಗಿಲು ಮುರಿದು ನನ್ನನ್ನು ರಕ್ಷಿಸಿದರು. ನನಗೆ ಮೈಮೇಲೆ ಪ್ರಜ್ಞೆಯೇ ಇರಲಿಲ್ಲ. ನಾನು ಅವತ್ತೇ ನಿರ್ಧರಿಸಿದ್ದೆ. ಇನ್ನೆಂದೂ ಅಪ್ಪನ ಮುಖವನ್ನು ನೋಡಬಾರದೆಂದು. ಅಕ್ಷರಶಃ ಅಂದಿನಿಂದ ನಾನು ಅವನ ಮುಖ ನೋಡಲೇ ಇಲ್ಲ. ಅಪ್ಪ ಹಾಗೆ ಹೊಡೆದ ದಿನವೇ ಪೊಲೀಸ್ ಇಲಾಖೆಯಲ್ಲಿ ಹೊಸತಾಗಿ ಕೆಲಸಕ್ಕೆ ಸೇರಿದ್ದ ನನ್ನ ಚಿಕ್ಕಪ್ಪ ಊರಿಗೆ ಬಂದಿದ್ದ. ತಾತ ನೋಡಲಾಗದೆ ಇವನನ್ನು ಹೇಗಾದರೂ ಈ ನರಕದಿಂದ ಪಾರು ಮಾಡಿ ನಾಲ್ಕಕ್ಷರ ಕಲಿಸಿ ಪುಣ್ಯ ಕಟ್ಟಿಕೊ ಎಂದು ನನ್ನ ಚಿಕ್ಕಪ್ಪನನ್ನು ಒಪ್ಪಿಸಿದ. ನನ್ನ ಚಿಕ್ಕಪ್ಪನೂ ಇನ್ನು ಮದುವೆಯಾಗದ ಕಾರಣ ಕೆಲಸಕ್ಕೆ ಇರಲಿ ಎಂದು ನನ್ನನ್ನು ಕರೆದೊಯ್ದ. ಹಾಗೆ ಕರೆತೊಯ್ಯುವಾಗ ನಿನಗೆ ಅನ್ನ ಮಾಡುಲು ಬರುತ್ತದೆಯೋ, ಸಾರು ಮಾಡಲು ಬರುತ್ತದೆಯೋ ಎಂದು

ವಿಚಾರಿಸಿದ್ದನ್ನು ನಾನು ಮರೆತಿಲ್ಲ. ಆದರೂ ಇವತ್ತಿಗೂ ಕೃತಜ್ಞತೆಯಿಂದ ನೆನೆಯುತ್ತೇನೆ.

**ಸಂಶೋಧಕಿ:** ಅಪ್ಪ ನಿಮ್ಮನ್ನು ಪ್ರೀತಿಸಿದ ಒಂದು ಉದಾಹರಣೆಯೂ ಇಲ್ಲವೇ

**ಮೊಗಳ್ಳಿ:** ತುಂಬಾ ಕಡಿಮೆ. ಹೆಚ್ಚು ಕಡಿಮೆ ಇಲ್ಲವೇ ಇಲ್ಲವೆನ್ನಬಹುದು. ಹಾಗೆ ಪ್ರೀತಿ ಮಾಡಿದ ಅಕ್ಕರೆಯಿಂದ ಅಪ್ಪಿಕೊಂಡ ಉದಾಹರಣೆಗಳೇ ಇಲ್ಲ.

**ಸಂಶೋಧಕಿ:** ನೆನಪು ಮಾಡಿಕೊಳ್ಳಿ

**ಮೊಗಳ್ಳಿ:** ಒಮ್ಮೆ ಮಾತ್ರ ಅಂತಹದೊಂದು ಘಟನೆ ನಡೆಯಿತು. ಯಾವುದೋ ಜಾತ್ರೆಯ ಸಂದರ್ಭ. ನನಗೆ ಗೊತ್ತಿಲ್ಲದೇ ಯಾವುದೋ ವಸ್ತುವನ್ನು ಬೀಳಿಸಿದ್ದೆ. ಅಪ್ಪ ರೌದ್ರಾವತಾರ ತಾಳಿ ಹಿಪ್ಪುನೇರಳೆಯ ಕಡ್ಡಿಯಿಂದ ಇಗ್ಗಾಮುಗ್ಗಾ ಬೆನ್ನಿಗೆ ಹೊಡೆಯತೊಡಗಿದ. ಅದು ನಮ್ಮ ತಾತ ನಡೆಸುತ್ತಿದ್ದ ಹೋಟೆಲಲ್ಲಿ ನಡೆದ ಘಟನೆ. ಇದು ನಡೆದಾಗ ನಮ್ಮ ತಾತ ಅಲ್ಲಿರಲಿಲ್ಲ. ನನ್ನನ್ನು ಬಿಡಿಸಿಕೊಳ್ಳುವವರ್‍ಯಾರೂ ಇರಲಿಲ್ಲ. ಮನಸೋ ಇಚ್ಛೆ ಹೊಡೆದ. ಅಷ್ಟೊತ್ತಿಗೆ ವಿಷಯ ಗೊತ್ತಾಗಿ ನನ್ನ ತಾಯಿ ಓಡೋಡಿ ಬಂದು ನನ್ನನ್ನು ಬಿಡಿಸಿಕೊಂಡರು. ನಾನು ಜೋರಾಗಿ ಅಳುತ್ತಿದೆ. ಹೊಡೆದಾದ ಮೇಲೆ ಹಾಗೆ ಅಳುವಂತೆಯೂ ಇಲ್ಲ. ನೋವು ಸಹಿಸಿಕೊಂಡು ಸುಮ್ಮನಿರಬೇಕು. ಒಂದು ವೇಳೇ ಅತ್ತರೆ ಮತ್ತೆ ಹೊಡೆಯುತ್ತಿದ್ದ. ನನ್ನ ತಾಯಿಯೂ ಏನೂ ಮಾತನಾಡುವಂತಿಲ್ಲ. ಮಾತನಾಡಿದರೆ ನನಗೆ ಹೊಡೆದಂತೆಯೇ ಅಮ್ಮನಿಗೂ ಹೊಡೆಯುತ್ತಿದ್ದ. ನನ್ನಮ್ಮ ಅತ್ಯಂತ ಕೋಮಲ ಸ್ವಭಾವದವಳು. ಅತ್ಯಂತ ಮೃದು ಸ್ವಭಾವದವಳು. ಆದರೂ ಅಂದು ಅಮ್ಮ ನನ್ನ ಬೆನ್ನಮೇಲಿನ ಅಂಗಿಯನ್ನು ಮೇಲೆತ್ತಿ ಬಾಸುಂಡೆಗಳನ್ನು ನೋಡುತ್ತಾ 'ನೋಡಿ, ಮಗೂಗೆ ಹೇಗೆ ಹೊಡೆದಿದೀರಿ' ಎಂದು ಅಳುತ್ತಾ ತೋರಿಸಿದಾಗ ಅಪ್ಪ ಹೌದಾ, ಎಂದು ಬಾಸುಂಡೆಗಳನ್ನು ಮುಟ್ಟಿ ನೋಡುತ್ತಾ ಬೆನ್ನು ನೇವರಿಸತೊಡಗಿದ. ಹಾಗೆ ನೇವರಿಸುವಾಗ ಅಪ್ಪನ ತೊಡೆಯ ಮೇಲೆ ಮಲಗಿದ್ದೆ. ಸ್ವಲ್ಪ ಹೊತ್ತು ಹಾಗೆ ನೇವರಿಸಿದವನ ಕಣ್ಣಲ್ಲಿ ದಿನವಿಡೀ ವಿಚಿತ್ರ ಬಗೆಯ ಕರುಣೆಯಿತ್ತು. ಬರೀ ನೋಟದಲ್ಲಿ. ಆ ನೋಟವೋ.... ಯಾವುದೋ ಅಸಹಾಯಕ ಪ್ರಾಣಿಯೊಂದನ್ನು ಕನಿಕರದಿಂದ ದಿಟ್ಟಿಸುವ ನೋಟ.

**ಸಂದರ್ಶಕಿ:** ನಿಮ್ಮ ತಂದೆ ಒಳ್ಳೆಯವರೋ ಕೆಟ್ಟವರೋ....

**ಮೊಗಳ್ಳಿ:** ಹಾಗೆ ಸರಳವಾಗಿ ಹೇಳುವುದು ಕಷ್ಟ....

**ಸಂದರ್ಶಕಿ:** ದುಷ್ಟರೇ....

**ಮೊಗಳ್ಳಿ:** ಹಾಗೂ ಹೇಳುವುದು ಕಷ್ಟ. ಅಪ್ಪನಿಗೆ ಹೆಣ್ಣುಮಕ್ಕಳೆಂದರೆ ವಿಶೇಷ ಪ್ರೀತಿ. ನನ್ನ ಅಕ್ಕಂದಿರ ಬಗ್ಗೆ ವಿಶೇಷವಾದ ಮಮತೆ. ಅವರನ್ನು ಚೆನ್ನಾಗಿಯೇ ನೋಡಿಕೊಳ್ಳುತ್ತಿದ್ದ...

ಅದೊಂದು ತರಹದ ಸಂಕೀರ್ಣವಾದ ವ್ಯಕ್ತಿತ್ವ. ಅಪ್ಪನಿಗೆ ಹಿಂಸೆಯೆಂದರೆ ಪ್ರೀತಿ. ಅವನಿಗೆ ಪಕ್ಕದೂರಿನ ಗೌಡ ಜನಾಂಗಕ್ಕೆ ಸೇರಿದ ಕೊಲೆಗಾರನೊಬ್ಬನ ಜೊತೆ ಸ್ನೇಹವಿತ್ತು. ಆ ಕೊಲೆಗಾರ ಒಂಟಿ ಹೆಣ್ಣುಮಕ್ಕಳು ಸಿಕ್ಕರೆ ಅತ್ಯಾಚಾರವೆಸಗಿ ಭೀಕರವಾಗಿ ಕೊಂದು ಹಾಕುತ್ತಿದ್ದಂತವನು. ಅವನನ್ನು ಹುಚ್ಚನೆಂದೇ ಕರೆಯುತ್ತಿದ್ದರು. ಅವನು ಆಗಾಗ ನಮ್ಮ ತೋಟದಲ್ಲಿರುವ ಗುಡಿಸಲಿನಲ್ಲಿ ತಲೆ ಮರೆಸಿಕೊಳ್ಳುತ್ತಿದ್ದ. ಅವನನ್ನು ಪಕ್ಕದೂರಿನವರು ಬೆನ್ನಟ್ಟಿಕೊಂಡು ಹೋಗಿ ಕಬ್ಬಿನಗದ್ದೆಯಲ್ಲಿ ಬಚ್ಚಿಟ್ಟುಕೊಂಡವನನ್ನು ಹುಡುಕಿ ಭೀಕರವಾಗಿ ಕೊಂದು ಹಾಕಿದರು.

ಅವನ ಕೈಕಾಲುಗಳನ್ನು ಕತ್ತರಿಸಿ, ರುಂಡವನ್ನು ಬೇರ್ಪಡಿಸಿ, ಕತ್ತರಿಸಿದ ಕೈಕಾಲುಗಳನ್ನು ರುಂಡದ ಕೆಳಗೆ ಇಟ್ಟು ಹೋಗಿದ್ದರು. ಇವನೊಂದಿಗಿನ ಸ್ನೇಹದಿಂದಾಗಿ ಅಪ್ಪನನ್ನು ಪೊಲೀಸರು ಎಳೆದೊಯ್ದು ಮೂರನೆಯ ದರ್ಜೆಯ ಶಿಕ್ಷೆಯೆಲ್ಲವನ್ನೂ ಅವನ ಮೇಲೆ ಪ್ರಯೋಗಿದ್ದರು. ಹೆಣ್ಣು, ಹೆಂಡ, ಶೋಕಿ ಎಲ್ಲವೂ ಅವನ ಸಂಗಾತಿಗಳಾಗಿದ್ದವು. ಊರಿನ ಗೌಡ ಪಟೇಲರ ಜೊತೆ ಅವನ ಸ್ನೇಹ.

ಬಹುಶಃ ಅವನಿಗೂ ವ್ಯವಸ್ಥೆಯ ವಿರುದ್ಧ ಯಾವುದೋ ಅಸಮಾಧಾನವಿದ್ದಿರಬಹುದೆನಿಸುತ್ತದೆ.

**ಸಂದರ್ಶಕಿ:** ನಿಮ್ಮ ಪ್ರಕಾರ ದಲಿತತ್ವ ಎಂದರೇನು, ವಿವರಿಸುತ್ತೀರಾ....

**ಮೊಗಳ್ಳಿ:** ಶತ ಶತಮಾಗಳಿಂದಲೂ ಕಡೆಗಣಿಸಲ್ಪಟ್ಟ ಸಮುದಾಯವು ತನ್ನ ಸ್ಥಿತಿಯಿಂದ ಪಾರಾಗುವುದಕ್ಕೆ ಕಂಡುಕೊಂಡ ವೈಚಾರಿಕವಾದ, ಸೃಜನಶೀಲವಾದ ಎಲ್ಲ ಬಗೆಯ ಅಭಿವ್ಯಕ್ತಿ, ಮತ್ತು ಚಿಂತನೆಯನ್ನು ದಲಿತತ್ವ ಎನ್ನಬಹುದು. ಈಗ ನಮ್ಮೆದುರಿಗಿರುವ ದಲಿತ ಸಾಹಿತ್ಯ ೩೦, ೪೦ ವರ್ಷಗಳ ಈಚೆಗಿನದು. ದೇವನೂರು ಮತ್ತು ದಲಿತ ಬಂಡಾಯ ಪರಂಪರೆಯ ನಂತರದ್ದು. ಆದರೆ ಆ ಬಗಿಗಿನ ಸೃಷ್ಟಿಶೀಲವಾದ ಸಾಹಿತ್ಯ ಬಂದದ್ದು ತುಂಬಾ ಕಡಿಮೆ ಎನ್ನಬಹುದು. ದೇವನೂರರು ಬರೆದದ್ದು ಸ್ವಲ್ಪವೇ. ಆದರೆ ಗುಣಾತ್ಮಕವಾಗಿ ಹಿರಿದಾದದ್ದನ್ನೇ ಸಾಧಿಸಿದ್ದಾರೆ. ದೇವನೂರರನ್ನು ಹೊರತು ಪಡೆಸಿದರೆ ದಲಿತ ಸಾಹಿತ್ಯ ಪರಿಕಲ್ಪನೆಯಲ್ಲಿ ಸಾಹಿತ್ಯ ರಚನೆಗೊಂಡಿದ್ದು ಕಡಿಮೆಯೇ ಎನ್ನಬಹುದು.

**ಸಂದರ್ಶಕಿ: ಹನ್ನೆರಡನೆಯ ಶತಮಾನದ ಬಸವಣ್ಣ, ದಲಿತ ವಚನಕಾರರು ದಲಿತತ್ವ ಚಿಂತನೆಯ ನೆಲೆಯಲ್ಲಿ ಬರುವುದಿಲ್ಲವೇ....**

**ಮೊಗಳ್ಳಿ:** ಖಂಡಿತಾ. ನಾನು ಹೇಳಿದ್ದು ಆಧುನಿಕ ಸಂದರ್ಭದಲ್ಲಿನ ಮಾತನ್ನು. ಅಸ್ಪೃಶ್ಯರನ್ನು ದೇವಾಲಯಗಳಿಗೆ ನುಗ್ಗಿಸಿದ ಗಾಂಧೀಜಿಗಿಂತಲೂ ಬಸವಣ್ಣ ಗ್ರೇಟ್. ಯಾಕೆಂದರೆ ಬಸವಣ್ಣ ದೇವಾಲಯಗಳನ್ನೇ ಒಪ್ಪದಿದ್ದವರು. ಮಾದಾರ ಚೆನ್ನಯ್ಯನ ಮಗನೆಂದು ಧರ್ಮಪಾಷಂಡಿಗಳ ಆ ಕಾಲಕ್ಕೆ ಘೋಷಿದ ಬಸವಣ್ಣ ಏಕಕಾಲಕ್ಕೆ ಕ್ರಾಂತಿಕಾರಿಯೂ ಹೌದು. ದಾರ್ಶನಿಕನೂ ಹೌದು. ಕುವೆಂಪು ಶೂದ್ರರ ವಿಮುಕ್ತಿಯ ಹಿನ್ನೆಲೆಯಲ್ಲಿ ವೈಚಾರಿಕತೆಯೊಂದನ್ನು ರೂಪಿಸಿದರು. ತತ್ವಶಾಸ್ತ್ರದ ದಾರ್ಶನಿಕ ನೆಲೆಯಲ್ಲಿ ದಾರ್ಶನಿಕರಾಗಿ ಯೋಚಿಸಿದ ಕುವೆಂಪು ವಿಶ್ವಮಾನವತತ್ವವೊಂದನ್ನು ರೂಪಿಸಿದರು. ಆದಾಗ್ಯೂ ಕುವೆಂಪು ಶುದ್ಧ ದಾರ್ಶನಿಕರೇ ಎನಿಸುತ್ತದೆ. ಆದರೆ ಬಸವಣ್ಣ ಏಕಕಾಲಕ್ಕೆ ದಾರ್ಶನಿಕರೂ ಹೌದು. ಲೌಕಿಕರೂ ಆಗಿದ್ದುದು ವಿಶೇಷ.

**ಸಂಶೋಧಕಿ:** ಬಸವಲಿಂಗಪ್ಪನವರ ಬೂಸಾ ಚಳವಳಿಯ ಬಗ್ಗೆ ಹೇಳುತ್ತೀರಾ...

**ಮೊಗಳ್ಳಿ:** ಮಾನಸಗಂಗೋತ್ರಿಯಲ್ಲಿ ಕಾರ್ಯಕ್ರಮವೊಂದರಲ್ಲಿ ಭಾಷಣ ಮಾಡುತ್ತಿದ್ದ ಬಸವಲಿಂಗಪ್ಪನವರು ಸಹಜವಾಗಿ ಮಾತಿನ ಓಘದಲ್ಲಿ ಕನ್ನಡ ಸಾಹಿತ್ಯವನ್ನು ಬೂಸಾ ಎಂದು ಕರೆದರು. ಅದನ್ನೊಂದು ನೆಪ ಮಾಡಿಕೊಂಡು ದಲಿತ ವಿರೋಧಿಗಳೆಲ್ಲರೂ ಸಂಘಟಿತರಾಗಿ ರಾಜ್ಯದಾದ್ಯಂತ ಚಳವಳಿ, ಬಂದ್ ಆಚರಿಸಿದರು. ಆದರೆ ಅವತ್ತು ಬಸವಲಿಂಗಪ್ಪನವರನ್ನು ಸಮರ್ಥಿಸಿದ್ದು ಕುವೆಂಪು ಮತ್ತು ಅನಂತಮೂರ್ತಿಯವರು ಎಂಬುದನ್ನು ಮರೆಯಲಾಗದು. ಈ ಘಟನೆಯ ನಂತರ ಕುವೆಂಪು ಅವರು ಉದ್ಘಾಟಿಸಿದ ಬರಹಗಾರರ ಒಕ್ಕೂಟ, ತದನಂತರ ದಲಿತ ಬಂಡಾಯಕ್ಕೆ ಸ್ಫೂರ್ತಿ ಒದಗಿಸಿತು. ಇದೇ ಬಸವಲಿಂಗಪ್ಪನವರು ಸಿದ್ಧಲಿಂಗಯ್ಯನಂಥವರಿಗೆ ನೀವು

ಬರೆಯಬೇಕಾದದ್ದು ಹೀಗೆ ಎಂದು ಸೂಚಿಸಿದ ಮೇಲೆಯೆ 'ಇಕ್ರಲಾ ವದಿರಲಾ' ಎಂದು ಆಡುಭಾಷೆಯಲ್ಲಿ ಕಾವ್ಯ ಬರೆಯಲು ಶುರುಮಾಡಿದ್ದು.

**ಸಂಶೋಧಕಿ: ಸಿದ್ಧಲಿಂಗಯ್ಯನವರ ಪ್ರಸ್ತಾಪ ಬಂದದಕ್ಕೆ ಈ ಮಾತು. ನೋಡಿ.... ನಮ್ಮಲ್ಲಿ ದೊಡ್ಡ ಲೇಖಕರು ಬದುಕುವ ಪರಿಗೆ ತೇಜಸ್ವಿ ಒಂದು ಶ್ರೇಷ್ಠ ಮಾದರಿ. ಸಿದ್ಧಲಿಂಗಯ್ಯನವರಂತೆ ಅವರು ಕ್ರಾಂತಿಗೀತೆಗಳನ್ನು ಆಲಾಪಿಸದಿದ್ದರೂ ವ್ಯವಸ್ಥೆಯನ್ನು ಧಿಕ್ಕರಿಸಿ ಬೌದ್ಧಿಕ ವಲಯಕ್ಕೂ, ಆಳುವ ವ್ಯವಸ್ಥೆಗೂ ಸದಾ ಎಚ್ಚರಿಕೆಯ ಭಯದ ಸಂಕೇತವಾಗಿದ್ದವರು ತೇಜಸ್ವಿಯವರು. ಆದರೆ ಇದಕ್ಕೆ ತದ್ವಿರುದ್ಧವಾಗಿ ದಲಿತರನ್ನು ಪ್ರತಿನಿಧಿಸುವ ಕ್ರಾಂತಿಕಾರಿ ಕವಿ ಸಿದ್ಧಲಿಂಗಯ್ಯನವರು ಸರ್ಕಾರದ ಸಂಸ್ಥೆಗಳಲ್ಲಿ ಅಧಿಕಾರಕ್ಕಾಗಿ ಹಾತೊರೆಯುವುದು ನೋಡಿದರೆ ಅವರು ಕರೆಪ್ಟ್ ಆಗಿದ್ದಾರೆನ್ನಿಸುವುದಿಲ್ಲವೆ.....**

**ಮೊಗಳ್ಳಿ:** ಅಯ್ಯಯ್ಯೋ... ಕರೆಪ್ಟಾ.... ಅಂತಿಂಥಾ ಕರೆಪ್ಟ್ ಅಲ್ಲಾ... ಸಿಕ್ಕಾಪಟ್ಟೆ.... ಕ್ರಾಂತಿಕನ್ನೆಯ ಬಗ್ಗೆ ಕವಿತೆ ಬರೆದ ಸಿದ್ಧಲಿಂಗಯ್ಯನವರು ಆ ಕ್ರಾಂತಿಕನ್ನೆಯನ್ನೇ ಬಲಪಂಥೀಯ ಮೂಲಭೂತವಾದಿಗಳಿಗೆ ಮಾರಿಕೊಂಡವರು.... ನೋಡಿ ಹೊಟ್ಟೆತುಂಬಾ ಉಣ್ಣಲು ಅವರಿಗೆ ಅವರ ಅಧ್ಯಾಪಕ ವೃತ್ತಿಯೇ ಸಾಕಾಗಿತ್ತು. ಈ ಅಧಿಕಾರ ಲಾಲಸೆಯ ಉಪದ್ವ್ಯಾಪವೆಲ್ಲಾ ಯಾಕೆ ಬೇಕಿತ್ತು. ನೋಡಿ.... ದಲಿತ ಬಂಡಾಯದ ಈ ಕ್ರಾಂತಿಕಾರಕ ಬದ್ಧತೆಗಳೇ ಆಳುವ ವ್ಯವಸ್ಥೆಯೊಳಗಡೆ ಪ್ರವೇಶಿಲು ಮೆಟ್ಟಿಲುಗಳಾದದ್ದು ಮಾತ್ರ ದುರಂತವೆನ್ನದೆ ವಿಧಿಯಿಲ್ಲ.

ಇನ್ನೂ ಒಂದು ವಿಶೇಷ ಏನಂತ ಗೊತ್ತಾ... ಇವರು ಊರು ಕೇರಿ ಮೊದಲ ಭಾಗವನ್ನು ಅರ್ಪಿಸಿದ್ದು ರಾಮಕೃಷ್ಣ ಹೆಗಡೆಯವರಿಗಾದರೆ ಎರಡನೆಯ ಭಾಗವನ್ನು ಕುಮಾರಸ್ವಾಮಿಯವರಿಗೆ ಅರ್ಪಿಸಿದರು. ಸಮುದಾಯವೊಂದರ ಪ್ರತಿನಿಧಿಯಾಗಿದ್ದುಕೊಂಡು ಆ ಸಮುದಾಯದ ಆಶೋತ್ತರಗಳಿಗೆ ಧ್ವನಿಯಾಗಬೇಕಾಗಿದ್ದವರು ಹೀಗೆ ಆ ಸಮುದಾಯದ ಮಾನವನ್ನು ಹರಾಜಿಗಿಟ್ಟುದುದು ಮಾತ್ರ ದುರಂತದ ಸಂಗತಿಯಲ್ಲದೆ ಬೇರೇನೂ ಅಲ್ಲ....

ನೋಡಿ.... ಇವತ್ತು ದಲಿತರ ಸಂಕೇತವೆಂದು ಯಾರನ್ನಾದರೂ ಪರಿಗಣಿಸಬಹುದಾದರೆ ಅದು ದೇವನೂರು ಮಾತ್ರ. ದೇವನೂರು ಮಾತನಾಡಿದರೆಂದರೆ ಎಲ್ಲರೂ ಅಲರ್ಟ್ ಆಗ್ತಾರೆ. ಆಳುವ ಸರ್ಕಾರಗಳು ಇವರಿಗೂ ಅದೆಷ್ಟೋ ಆಸೆ ಅಮಿಷಗಳನ್ನು ಒಡ್ಡಿದರೂ ಅವನ್ನು ತುಚ್ಛವಾಗಿ ಕಂಡವರು ಇವರು. ಸ್ವತಃ ರಾಜಕೀಯ ಪಕ್ಷಕಟ್ಟಿಕೊಂಡರೂ ಬೇರಾವ ರಾಜಕೀಯ ಪಕ್ಷದೊಂದಿಗೆ ಮೈತ್ರಿ ಮಾಡಿಕೊಳ್ಳದೆ, ಭೂಮಾಲೀಕ ವ್ಯವಸ್ಥೆಯ ಪರವಾಗಿರುವ ರೈತಸಂಘದ ಜೊತೆ ಸ್ನೇಹ ಮಾಡಿದರು.

**ಸಂಶೋಧಕಿ: ಇವರು ಪಡೆದ ಅಧಿಕಾರ, ಪದವಿ, ಗೌರವಗಳಿಂದ ತುಂಬಾ ಮಂದಿ ದಲಿತರು ಅವರಿಂದ ಉಪಕಾರ ಪಡೆದಿದ್ದಾರೆಂದು ಹೇಳಲಾಗುತ್ತಿದೆಯಲ್ಲ.....**

**ಮೊಗಳ್ಳಿ:** ಸುಳ್ಳು. ಈ ಮಾತನ್ನು ನಾನು ನಂಬುವುದಿಲ್ಲ.

**ಸಂಶೋಧಕಿ: ಸಿದ್ಧಲಿಂಗಯ್ಯನವರ ಈ ಜೀವನವಿಧಾನದಿಂದಾಗಿ ಅವರ ಸೃಜನಾತ್ಮಕತೆ ಬತ್ತಿಹೋಗಿದೆಯೆನ್ನಿಸುವುದಿಲ್ಲವೆ.**

**ಮೊಗಳ್ಳಿ:** ನಿಜ ಅವರ ಊರು ಕೇರಿ ಮೊದಲ ಭಾಗ ಪರವಾಯಿಲ್ಲ.... ಆದರೆ ಎರಡನೆಯ ಭಾಗ ಏನೇನೂ ಚೆನ್ನಾಗಿಲ್ಲ. ಕ್ರಾಂತಿಗೀತೆಗಳ ನಂತರ ಅಂತಹ ಮಹತ್ವದ್ದೇನನ್ನೂ ಬರೆಯಲಾಗಲಿಲ್ಲವೆನ್ನುವುದು ಮಾತ್ರ ವಾಸ್ತವ.

**ಸಂಶೋಧಕಿ: ಕನ್ನಡದಲ್ಲಿ ದೇವನೂರರ ನಂತರ ಅವರ ಪ್ರಭಾವದಿಂದ ಸೃಷ್ಟಿಗೊಂಡ ಪ್ರಾದೇಶಿಕತೆಯ ನೆಲೆಯ ಸಾಹಿತ್ಯದ ಕುರಿತು ತಮ್ಮ ಅಭಿಪ್ರಾಯ.**

**ಮೊಗಳ್ಳಿ:** ನೋಡಿ.... ದೇವನೂರು ಅವರ ಕುಸುಮಬಾಲೆ ಸುದ್ದಿ ಸಂಗಾತಿಯಲ್ಲಿ ಪ್ರಕಟಗೊಂಡಾಗ ನಾನಿನ್ನೂ ಆಗ ವಿದ್ಯಾರ್ಥಿ. ಮೈಸೂರಿನಲ್ಲಿ ಎಡಪಂಥೀಯ ಸಂಘಟನೆಗಳಲ್ಲಿ ಕಾಣಿಸಿಕೊಳ್ಳುತ್ತಿದ್ದ ನನಗೆ ಆಗ ದೇವನೂರು ಅವರು ವೈಯಕ್ತಿಕವಾಗಿ ಅಷ್ಟಾಗಿ ಪರಿಚಯವಿರಲಿಲ್ಲ. ಮುಖ ಪರಿಚಯ ಮಾತ್ರ.... ಈಗ ಮೈಸೂರಿನಲ್ಲಿ ಹಳೇ ಬಸ್‌ಸ್ಟ್ಯಾಂಡ್ ಇದೆಯಲ್ಲಾ... ಆ ಬಸ್‌ಸ್ಟ್ಯಾಂಡಲ್ಲಿ ನಾನು ನನ್ನ ಮಿತ್ರರು ಗಂಗೋತ್ರಿಗೆ ಹೋಗಲು ಬಸ್ಸಿಗಾಗಿ ಕಾಯುತ್ತಿದ್ದೆವು. ನಮ್ಮ ಕೈಯಲ್ಲಿ ಅದೇ ತಾನೆ ಮಾರ್ಕೆಟ್ಟಿಗೆ ಬಂದ ಸುದ್ದಿಸಂಗಾತಿ ಪತ್ರಿಕೆಯಿತ್ತು. ಅಲ್ಲಿಯೇ ಇದ್ದ ದೇವನೂರರು ನಮ್ಮ ಕೈಯಲ್ಲಿದ್ದ ಸುದ್ದಿಸಂಗಾತಿಯನ್ನು ಗಮನಿಸಿ ನಮ್ಮೆಡೆಗೆ ಬಂದು ಪತ್ರಿಕೆಯನ್ನು ತೆಗೆದುಕೊಂಡು 'ಛೇ ಛೇ.... ಫ್ಲಾಪ್ ಆಯ್ತು ಕಣ್ರೀ.. ಫ್ಲಾಪ್ ಆಯ್ತು...' ಎಂದು ಹತಾಶೆಯಿಂದ ಗೋಗರೆಯುತ್ತಿದ್ದರು. ನಮಗೆ ಯಾಕೆ ಹಾಗಂದರೂ ಎಂದು ತಕ್ಷಣ ತಿಳಿಯಲಿಲ್ಲ. ಆಮೇಲೆ ನೋಡಿದರೆ ಅದರಲ್ಲಿ ಅವರ ಕುಸುಮಬಾಲೆ ಧಾರವಾಹಿಯಾಗಿ ಪ್ರಕಟಗೊಳ್ಳುತ್ತಿರುವುದು ಗಮನಕ್ಕೆ ಬಂತು. ಅಲ್ಲಿಯವರೆಗೆ ನಾವ್ಯಾರೂ ಅದನ್ನು ಸೀರಿಯಸ್ಸಾಗಿ ತೆಗೆದುಕೊಂಡಿರಲೇ ಇಲ್ಲ. ಆ ಧಾರವಾಹಿಯನ್ನು ಓದಿಯೂ ಇರಲಿಲ್ಲ. ನನಗೆ ಆಶ್ಚರ್ಯವಾಯಿತು. ಕುಸುಮಬಾಲೆ ಪಡೆದುಕೊಂಡ ಯಶಸ್ಸು ಸ್ವತಃ ಅಂದಿನ ಆ ಸ್ಥಿತಿಯ ದೇವನೂರರೇ ನಂಬಲಿಕ್ಕಿಲ್ಲ. ಅಂಥ ಸ್ವಂತ ನಂಬಿಕೆಗಳನ್ನೆ ಬುಡಮೇಲು ಮಾಡುವ ಶಕ್ತಿ ಮಹಾನ್ ಪ್ರತಿಭೆಗೆ ಮಾತ್ರ ಸಾಧ್ಯ. ಅಂತಹ ಮಹಾನ್ ಲೇಖಕರು ದೇವನೂರು ಅವರು. ಸಮುದಾಯವೊಂದರ ದಲಿತ ಬದುಕಿನ ಅಭಿವ್ಯಕ್ತಿಯ ಕ್ರಮವನ್ನಾಗಿ ದೇವನೂರರು ಆ ಸಮುದಾಯದ ಭಾಷೆಯನ್ನು ಶಿಷ್ಟಕನ್ನಡದೊಂದಿಗೆ ಪ್ರಯೋಗಿಸಿದರು. ಅಲ್ಲಿ ಅವರ ಪ್ರತಿಭೆ, ಧಾರಣಶಕ್ತಿಯಿಂದಾಗಿ ಅದು ಯಶಸ್ವಿಯಾಗಿರಬಹುದು. ಆದರೆ ನಂತರದ ಅವರ ಪ್ರಭಾವದಿಂದಾಗಿ ಹುಟ್ಟಿಕೊಂಡ ಆಡುನುಡಿಯಲ್ಲಿ ಬರೆಯುವ ಗುಂಪು ಅಂತಹ ಯಶಸ್ಸೇನನ್ನೂ ಪಡೆಯಲಿಲ್ಲ. ಹೆಚ್. ಎಸ್. ರಾಘವೇಂದ್ರರಾವ್, ಕೆ.ವಿ. ನಾರಾಯಣರಂಥ ವಿಮರ್ಶಕರು ಇಂಥ ಒಂದು ಪ್ರಕ್ರಿಯೆಗೆ ವಿಶೇಷ ಪ್ರೋತ್ಸಾಹ ನೀಡಿದ್ದರ ತಾತ್ವಿಕತೆಯೇ ಬೇರೆಯದು. ಆಸ್ಥಾನ ಕನ್ನಡಕ್ಕೆ ವಿರುದ್ಧವಾಗಿ ಈ ಬಗೆಯ ಆಡುನುಡಿಯ ಭಾಷಿಕ ಅನನ್ಯತೆಯನ್ನು ಎತ್ತಿಹಿಡಿಯುವುದು ಅವರ ಉದ್ದೇಶವಾಗಿತ್ತು. ಆದರೆ ದೇವನೂರರ ನಂತರದಲ್ಲಿ ಅಂತಹ ಪ್ರಯೋಗಗಳಾವೂ ಯಶಸ್ಸು ಪಡೆಯಲಿಲ್ಲ. ಆಡುನುಡಿಯ ಅಂತಹ ಸಾಹಿತ್ಯಿಕ ರಚನೆಗಳನ್ನು ಅವುಗಳ ಸಾಹಿತ್ಯಿಕ ಗುಣಕ್ಕಾಗಿಯಲ್ಲದೆ ಭಾಷಿಕ ಅಧ್ಯಯನಗಳನ್ನಾಗಿಯಷ್ಟೆ ನೋಡಬಹುದು.

**ಸಂದರ್ಶಕಿ: ಕುಂವೀ ಮತ್ತು ದೇವನೂರು....**

**ಮೊಗಳ್ಳಿ:** ಒಂದ್ನಿಮಿಷ. ಆ ವಿಷಯಕ್ಕೇ ಬರುತ್ತೇನೆ.... ದೇವನೂರರು ಪ್ರಖರ ಸೂರ್ಯನಂತಿದ್ದರೆ, ಕುಂವೀ ಆ ಪ್ರಖರ ಸೂರ್ಯನ ಹಗಲಲ್ಲಿ ಉರಿಯುತ್ತಿರುವ ಹಾಲೋಜನ್ ಬಲ್ಬ್ ಇದ್ದಂತೆ. ಅಥವಾ ಹೀಗೂ ಹೇಳಬಹುದು. ನಡುಹಗಲಲ್ಲಿ ತಲೆಗೆ ಹೆಡ್‌ಲೈಟ್ ಕಟ್ಟಿಕೊಂಡು ನಿಮಗೆ ಬೆಳಕು ತೋರಿಸುತ್ತೇನೆ ಎಂದು ಆಹ್ವಾನಿಸುವಂತೆ ಇದ್ದಾರೆ ಕುಂವಿ. ಕುಂವಿಗೂ ಪೂರ್ವದಲ್ಲಿ ಹೈದ್ರಬಾದ್ ಕರ್ನಾಟಕದ ಶಾಂತರಸರು ಕ್ಲಾಸಿಕ್ ಆದಂತಹ ಬರವಣಿಗೆಯೊಂದರ ಮಾದರಿಯನ್ನು ರೂಪಿಸಿದ್ದರು. ಅನಂತಮೂರ್ತಿಯವರಷ್ಟೇ ಸಮರ್ಥವಾಗಿ ಬರೆಯಬಲ್ಲ ರಾಜಶೇಖರ್ ನೀರಮಾನ್ವಿಯವರ ಎತ್ತರಕ್ಕೂ ಕುಂವೀ ಏರಲಾಗುವುದಿಲ್ಲವೆಂದಾಗ ದೇವನೂರರ

ಬರವಣಿಗೆಯೊಂದಿಗೆ ಕುಂವೀ ಅವರ ಹೋಲಿಕೆಯೇ ಅಸದಳ. ದೇವನೂರರನ್ನು ಅನುಸರಿಸ ಹೊರಟವರೆಲ್ಲಾ ವಿಫಲರಾದರೆಂದೇ ಹೇಳಬಹುದು.

**ಸಂದರ್ಶಕಿ: ಕಡೆಯದಾಗಿ ನೀವು ಕೆಂಡಸಂಪಿಗೆಯಲ್ಲಿ ಬರೆಯಲು ಹೊರಟ ಹಂಪಿ ಕುರಿತಾದ ಲೇಖನಮಾಲೆಯನ್ನು ಕಾದಂಬರಿಯನ್ನಾಗಿ ಬದಲಾಯಿಸಿದ್ದರ ಕಾರಣ....**

**ಮೊಗಳ್ಳಿ:** ಹಂಪಿ ಡೈರಿ ಎಂದು ಬರೆಯಲು ಹೊರಟು ಏಕ ಮಾತ್ರ ಲೇಖನ ಪ್ರಕಟಗೊಂಡಾದ ಮೇಲೆ ಅದನ್ನು ಮುಂದಿನ ವಾರವೇ ಕಾದಂಬರಿಯನ್ನಾಗಿ ಬರೆಯಲು ಯೋಚಿಸಿದೆ. ಏಕೆಂದರೆ ನನ್ನ ಅಭಿವ್ಯಕ್ತಿಗೊಗ್ಗುವ ಮಾಧ್ಯಮ ಕಥನ. ಕಥವೇ ನನ್ನ ಉಸಿರು. ಈ ಕುರಿತಾದ ಕಾರಣಗಳನ್ನು ಕೆಂಡಸಂಪಿಗೆಯಲ್ಲೇ ಗತಿ ಕಾದಂಬರಿ ಆರಂಭದ ಮೊದಲೇ ನೀಡಿರುತ್ತೇನೆ. ನೀವು ಸಾಧ್ಯವಾದರೆ ಅದನ್ನೊಮ್ಮೆ ನೋಡಿ.

ಸಂದರ್ಶಕಿ: ಕಡೆಯದಾಗಿ ಒಂದು ಪ್ರಶ್ನೆ... ಮೂಲತಃ ಮೈಸೂರಿನ ಭಾಗದವರಾದ ತಮಗೆ ಈ ಕಡೆಯ ಜನ, ಸಂಸ್ಕೃತಿ, ವಾತಾವರಣ ಹೇಗೆನ್ನಿಸುತ್ತದೆ...

**ಮೊಗಳ್ಳಿ:** ನಾನು ಭಾಗಶಃ ನಮ್ಮ ಕಡೆಯ ನೆನಪನ್ನೇ ಮರೆತುಹೋಗುವಷ್ಟು ಹಂಪಿಯ ಪರಿಸರಕ್ಕೆ ಹೊಂದಿಕೊಂಡಿರುತ್ತೇನೆ. ಮಹಾನಗರಗಳ ಪ್ರಭಾವದಿಂದಾಗಿ ನಮ್ಮ ಕಡೆಯ ಹಳ್ಳಿಗಳು ವಿನಾಶದತ್ತ ಸಾಗುತ್ತಿವೆ. ಆದರೆ ಇಲ್ಲಿ ಹೀಗ್ಗೆ ನೂರುವರ್ಷಗಳ ಹಿಂದಿನ ಹಳೆಯ ಮೈಸೂರು ಈಗಲೂ ಜೀವಂತವಾಗಿದೆ. ಮನುಷ್ಯ ಸಂಬಂಧಗಳು ಜೀವಂತವಾಗಿವೆ. ಹಳ್ಳಿಗಳು ಜೀವಂತವಾಗಿವೆ. ಇಂತಹ ಪರಿಸರದಲ್ಲಿರುವುದೇ ಒಂದು ಸಂತೋಷದ ಸಂಗತಿ.

# ಅನುಬಂಧ ಎರಡು
# ಗತಿ ಕಾದಂಬರಿಯ ಎರಡು ಅಧ್ಯಾಯಗಳು

ಮೊಗಳ್ಳಿಯವರ ಕಥನದ ವಿಶಿಷ್ಟತೆ ಮತ್ತು ಸಾಧ್ಯತೆಯನ್ನು ವಿವರಿಸುವ ಗತಿ ಕಾದಂಬರಿಯ ಈ ಎರಡೂ ಅಧ್ಯಾಯಗಳನ್ನು ಇಲ್ಲಿ ಕೊಡಲಾಗಿದೆ. ಈ ಎರಡೂ ಅಧ್ಯಾಯಗಳಲ್ಲಿ ಮನುಷ್ಯನ ಭ್ರಮೆ, ವಿಭ್ರಮೆಗಳನ್ನು, ಆಳದ ಏಕಾಂಗಿತನವನ್ನು, ತಬ್ಬಲಿತನವನ್ನು, ಕೊನೆಯೇ ಇಲ್ಲದ ಮನುಷ್ಯನ ಕ್ರೌರ್ಯವನ್ನೂ ಚಿತ್ರಿಸುವ ಬಗೆ ಅಸದೃಶವಾಗಿದೆ. ಈ ಭಾಗಗಳನ್ನು ಓದುತ್ತಿದ್ದಂತೆಯೆ ನಮಗೆ ಕಾಫ್ಕಾ ನೆನಪಾಗುತ್ತನೆ.

ಅತ್ಯಾಧುನಿಕ ಪ್ರಜ್ಞೆಯಿಂದ ಚರಿತ್ರೆಯನ್ನು ವಸ್ತುವಾಗಿಸಿಕೊಂಡು ಮೊಗಳ್ಳಿಯವರು ಬರೆಯತೊಡಗಿರುವ ಈ ಕಾದಂಬರಿ ಅವರ ಅತ್ಯಂತ ಮಹಾತ್ವಾಕಾಂಕ್ಷೆಯ ಕೃತಿ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಈ ಕಾದಂಬರಿಯು *ಕೆಂಡಸಂಪಿಗೆ* ಅಂತರ್ಜಾಲ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಳ್ಳುತ್ತಿದೆ.

೧

# ಕತ್ತಲ ಸೆರೆಯ ಕೂಪದಲ್ಲಿ ಮುಳುಗಿ

ಸುತ್ತು ಬಳಸಿನ ಅರಮನೆಯ ಒಳದಾರಿಯಲ್ಲಿ ಸಾಗಿ ನೆಲಮಾಳಿಗೆಯ ತಳಕ್ಕೆ ಬಂದು ಅಲ್ಲಿಂದ ಸುರಂಗ ಮಾರ್ಗವನ್ನು ತಲುಪುವ ವೇಳೆಗೆ ಬೆವೆತು ಹೋಗಿದ್ದೆ. ಕತ್ತಲೆಯ ಸುರಂಗವು ಸಾಮ್ರಾಜ್ಯದ ಕ್ರೂರ ವಾಸನೆಗಳನ್ನು ಹುದುಗಿಸಿಕೊಂಡಿತ್ತು. ಸುರಂಗದ ದಾರಿಯು ಯಾವತ್ತೂ ಮೃತ್ಯವನ್ನು ಬೆನ್ನಿಗೆ ಹೇರಿಕೊಂಡೇ ನಡೆದಂತೆ. ಅಲ್ಲಿ ಏನಾದರೂ ಆಗಬಹುದು. ಸುತ್ತು ಬಳಸಿನ ಸುರಂಗದ ಕತ್ತಲಲ್ಲಿ ಮುಳುಗಿದವೆಂದರೆ ನಾವು ಎಲ್ಲಿರುತ್ತೇವೆ ಎಂಬ ಯಾವ ಗುರುತೂ ಕಾಣದು. ಅಲ್ಲಿ ಯಾರೂ ಆಶ್ರಯಕ್ಕೆ ಇರುವುದಿಲ್ಲ. ತಪ್ಪಿಸಿಕೊಂಡು ಓಡಿ ಹೋಗಲು ದಾರಿಯೂ ಕಾಣುವುದಿಲ್ಲ. ಕತ್ತಲೆಯಲ್ಲೇ ಇರುವುದೆಲ್ಲವನ್ನು ತಕ್ಕುದಾಗಿ ಗ್ರಹಿಸಿ ಹೆಜ್ಜೆ ಇಡಬೇಕು. ಅದೊಂದು ಬಗೆಯ ಮನೋ ಪಥ. ಮನದ ಕಣ್ಣಿಂದಲೇ ಕೂಪ ದಾರಿಯನ್ನು ದಾಟಿ ಹೋಗಬೇಕು. ಬೆಟ್ಟಗುಡ್ಡ ಗಿರಿಶಿಖರಗಳ ಭೂತಳದಲ್ಲಿರುವ ಸುರಂಗ ಮಾರ್ಗಗಳು ಸಾವಿನ ಹಾದಿಯಂತೆಯೇ ನಿಗೂಢವಾಗಿ ಸಾಗಿರುತ್ತವೆ. ಸಾಮ್ರಾಜ್ಯದ ಸುಂದರ ನಗರಿಯ ರಾಜಬೀದಿಗಳ ನೆಲದಾಳದಲ್ಲಿ ಕೊರೆದಿರುವ ನಗರದ ದಾರಿಗಳು ಯಾವ ಪಯಣದ ಕೊನೆಯೊ.... ಸುರಂಗದಲ್ಲೇ ಕಡಿದಾಡಿ ಅರೆ ಜೀವದಲ್ಲೆ ನರಳಾಡಿ ಉರುಳಿದ್ದವರನ್ನು ತನ್ನಲ್ಲೆ ಲೀನವಾಗಿಸಿಕೊಂಡಿದ್ದ ಮಣ್ಣು ಅಸ್ತಿವಾಸನೆಯನ್ನು ಅಲ್ಲಲ್ಲಿ ಬಿಟ್ಟಿತ್ತು. ಯಾವುದೊ ಅಸ್ತಿಪಂಜರದ ಮೂಳೆ ಕಾಲಿಗೆ ತಾಕಿ ಪರಚಿತು. ಯಾವ ಸೈನಿಕನೊಬ್ಬನ ಮೂಳೆಯೋ, ಯಾವ ನಿಷ್ಠಾವಂತನ ಎಲುಬಿನ ತುದಿಯೊ, ಇಲ್ಲವೇ ಚೂರಾದ ತಲೆಬುರಡೆಯ ಚಿಪ್ಪೋ.... ನನ್ನ ಕಾಲು ಉರಿಯುತ್ತಿತ್ತು. ಸದಾಶಿವರಾಯನನ್ನು ಭೆಟ್ಟಿಯಾಗಲು ಇಷ್ಟೊಂದು ಕಷ್ಟವಿದೆ ಎಂದುಕೊಂಡಿರಲಿಲ್ಲ. ಹಿಂದೊಬ್ಬ ಮುಂದೊಬ್ಬ ಸೈನಿಕರು ನನ್ನನ್ನು ನಿಗೂಢ ದಾರಿಯಲ್ಲಿ ಕರೆದೊಯ್ಯುತ್ತಿದ್ದರು. ಅವರಿಬ್ಬರೂ ಯಾವುದೊ ಆದೇಶದಂತೆ ವರ್ತಿಸುತ್ತಿದ್ದರು. ಯಾವ ಮಾತಿಗೂ ಅವರು ಪ್ರತಿಕ್ರಿಯಿಸಿರಲಿಲ್ಲ. ಎಷ್ಟೊ ದೂರ ನಡೆದರೂ ಸುರಂಗ ಮುಗಿಯುತ್ತಿಲ್ಲವೆಂದರೆ ಇದೆಲ್ಲೊ ಭೂಗರ್ಭಕ್ಕೆ ಕೊಂಡೊಯ್ಯುತ್ತಿದೆಯೇನೊ ಎನಿಸಿ.... ಇನ್ನೂ ಎಷ್ಟು ದೂರವಿದೆ ಎಂದೆ. ಅವರು ಬಾಯಿಬಿಡಲಿಲ್ಲ. ಹಿಂದಿದ್ದ ಸೈನಿಕ ಕತ್ತಿಯ ಮೊನೆಯನ್ನು ಬೆನ್ನಿಗಿಟ್ಟು 'ಬೇಗ ಬೇಗೆ ನಡೆ' ಎಂದಿದ್ದ. ಇವರಿಬ್ಬರೂ ಇಲ್ಲೇ ಈ ಸುರಂಗದ ಕೂಪದಲ್ಲೇ ತನ್ನನ್ನೂ ತಳ್ಳಿ ಬಿಡುವರು ಎನಿಸಿ ಮಂದಾರ ನೆನಪಾಗಿ ಜೀವವ ಹಿಂಡಿದಂತಾಯಿತು.

ಸುರಂಗದ ಕೂಪದ ಬಗ್ಗೆ ಸಾಕಷ್ಟು ಕೇಳಿದ್ದೆ. ನವರಾತ್ರಿಯ ಬಲಿ ಹಬ್ಬದಂದು ಸಾಮ್ರಾಜ್ಯದ ವಿರುದ್ಧ ಸೊಲ್ಲೆತ್ತಿದವರನ್ನೆಲ್ಲ ಉಪಾಯದಲ್ಲಿ ಸೆರೆ ಹಿಡಿದು ತಂದು ಇದೇ ಸುರಂಗದ ಹಾದಿಯಲ್ಲಿ ಸಾಗಿಸಿ ಆ ಕೂಪಕ್ಕೆ ತಳ್ಳಿಬಿಡುವರು ಎಂಬುದು ಕೇವಲ ಕಲ್ಪನೆಯಾಗಿರಲಿಲ್ಲ. ತುಂಗಭದ್ರಾ ನದಿಯ ದಂಡೆಯಲ್ಲೇ ಸಾಗಿ ಹೋಗುವ ಆ ಸುರಂಗ ಮಾರ್ಗವು ಮಹಾನವಮಿ ದಿಬ್ಬದ ಆಸುಪಾಸಿನ ಎಲ್ಲೊ ಒಂದು ಉಪದಾರಿಯನ್ನು ಹೊಂದಿದೆ ಎಂಬುದನ್ನು ನಾನು ತಿಳಿದಿದ್ದೆ. ಯುದ್ಧದ ಅಪಾಯದಲ್ಲಿ ತಪ್ಪಿಸಿಕೊಳ್ಳಲು ಇದ್ದ ಹತ್ತಾರು ಸುರಂಗಗಳ ನಕಾಶೆಯು ಯಾವುತ್ತೂ ನಿಗೂಢವಾಗಿಯೇ ಇತ್ತು. ರಾಮರಾಯ ನನ್ನನ್ನು ಕೊಲ್ಲಿಸಲು ಅದೇಶಿಸಿರಬೇಕೆಂಬ ಅನುಮಾನ ಬಂತು. ಒಂದು ವೇಳೆ ಹೋರಾಡಿ ಒಬ್ಬನನ್ನಾದರೂ ಕೊಂದು ಸಾಯುವ ಎಂದರೆ ನನ್ನ ಬಳಿ ಯಾವ ಆಯುಧವೂ ಇರಲಿಲ್ಲ. ವಜ್ರಕಾಯದಂತಿದ್ದ ಅವರಿಬ್ಬರನ್ನು ನಾನು ನನ್ನ ಮುಷ್ಠಿಯುದ್ಧದಿಂದಲೂ ಮುಗಿಸುವಂತಿರಲಿಲ್ಲ. ಮನೋಬಲವೇ ಎಲ್ಲ ಆಯುಧಗಳಿಗಿಂತಲೂ ಬಲಿಷ್ಠವೆಂದು ತಿಳಿದು ಆದದ್ದಾಗಲಿ ಎಂದು ಧೈರ್ಯ ತುಂಬಿಕೊಂಡೆ. ಕತ್ತಲ ಸುರಂಗದಲ್ಲಿ ಹೊಡೆದಾಡುವ ಯುದ್ಧಕಲೆ ಅಪರೂಪವಾದದ್ದು. ಶಬ್ಧವೇದಿಯುದ್ಧವನ್ನು ಅರಿತವರು ಮಾತ್ರವೇ ಅಂತಹ ಸ್ಥಿತಿಯಲ್ಲಿ ಬದುಕುಳಿಯಬಲ್ಲರು. ಮನೋಬಲವೇ ಪಂಚೇಂದ್ರಿಯಗಳ ಗ್ರಹಿಕೆಯೇ ಅಲ್ಲಿ ಶತ್ರುವಿನ ಮಾಯಾರೂಪವನ್ನು ಹೊಡೆದುರುಳಿಸುವುದು. ನನ್ನ ಪ್ರಾಯಕಾಲದಲ್ಲಿ ಅಂತಹ ಯುದ್ಧಕಲೆಯನ್ನು ಕಲಿತಿದ್ದೆ. ಇದು ಸಾವೇ ಮುಖಾಮುಖಿಯಾದಾಗ ಕೊನೆಗೊಳ್ಳುವ ಏಕೈಕ ಪ್ರಾಣತಂತ್ರ.

'ನೀವು ದಾರಿ ತಪ್ಪಿರಬಹುದು ಅಥವಾ ನನ್ನ ದಾರಿ ತಪ್ಪಿಸುತ್ತಿರಬಹುದಲ್ಲವೇ' ಎಂದೆ. 'ಸದಾಶಿವರಾಯನನ್ನು ಇಂತಹ ಉಗ್ರಸ್ವರೂಪದಲ್ಲಿ ಬಂಧಿಸುವ ಅಗತ್ಯವೇನಿತ್ತು' ಎಂದಾಗಲೂ ಅವರು ಏನನ್ನೂ ಹೇಳದೆ ಹತ್ತು ಹೆಜ್ಜೆ ಹಾಕಿದ ಮೇಲೆ ಸುಮ್ಮನೆ ನಿಂತುಬಿಟ್ಟರು. ಸುರಂಗದ ಆಳ ಪಾತಾಳದ ಯಾವುದೋ ಒಂದು ತಳದಲ್ಲಿ ಬಂಡೆಯನ್ನು ಸರಿಸಿದಂತೆ ಏನೊ

ಸದ್ದಾಯಿತು. ಕ್ಷೀಣವಾದ ಬೆಳಕು ಪ್ರಯಾಸದಿಂದ ನಮ್ಮನ್ನು ಇಣುಕಿ ನೋಡಿತು. ಹೆಚ್ಚುಕಡಿಮೆ ನನ್ನನ್ನು ಅವರಿಬ್ಬರು ಒಳಕ್ಕೆ ತಳ್ಳಿದಂತೆಯೆ ನೂಕಿದರು. ಕೂಡಲೆ ಹೆಬ್ಬಂಡೆ ಬಾಗಿಲು ಮುಚ್ಚಿಕೊಂಡಿತು. ಕರೆ ತಂದಿದ್ದವರು ಮಾಯವಾಗಿದ್ದರು. ರಾಮರಾಯ ನಿರ್ಮಿಸಿರುವ ಈ ನಿಗೂಢ ಸೆರೆಮನೆ ಏಳುಸುತ್ತಿನ ಕೋಟೆಗಿಂತಲೂ ಮಿಗಿಲಾಗಿದೆ ಎನಿಸಿತು. ಕೃಶವಾದ ಬೆಳಕು ನಿಧಾನಕ್ಕೆ ಬಲಿಯಿತು. ಮತ್ತೊಬ್ಬ ವ್ಯಕ್ತಿ ಮುಂದೆ ಕರೊದೊಯ್ದು. ಗವಿಯಂತಿದ್ದ ಆ ಸುರಂಗದ ಮನೆಯ ಮೂಲೆಗಳಲ್ಲಿ ಮಾತ್ರ ಮಿಂಚು ಬೆಳಕಿತ್ತು. ಇಲ್ಲಿ ಸಾಕಷ್ಟು ಜನ ವಾಸವಾಗಿದ್ದಾರೆ ಎಂಬ ವಾಸನೆ ಅರಿವಾಯಿತು. ಈ ಕೂಪಗವಿಯಲ್ಲಿ ಅದೆಂತಹ ಜೀವನವೊ.... ಮತ್ತೊಂದು ಸುತ್ತು ಬಳಸಿ ಬಂದ ಮೇಲೆ ಅಲ್ಲೊಂದು ವಿಶಾಲ ಪ್ರಾಂಗಣವಿತ್ತು. ಆಲಿವ್ ಎಣ್ಣೆಯ ದೀಪಗಳು ಮಂದವಾಗಿ ಉರಿಯುತ್ತಿದ್ದವು. ಶಿಲೆಯಂತೆ ಕಾವಲುಗಾರರು ನಿಂತೇ ಇದ್ದರು. ಈತನಾದರೂ ಮಾತನಾಡಬಹುದೆಂದು ಭಾವಿಸಿ, 'ಸದಾಶಿವರಾಯನ ಜೊತೆಯೇ ತನ್ನನ್ನೂ ಸೆರೆಗೀಡುಮಾಡುವರಲ್ಲವೇ' ಎಂದೆ. ಕರೆದೊಯ್ಯುತ್ತಿದ್ದ ಈತ ಮೊದಲಿನವರಿಗಿಂತ ಬೇರೆಯಾಗಿರಲಿಲ್ಲ. ನನಗೆ ತಲೆ ಕೆಡುತ್ತಿತ್ತು. ಸಾವೇ ಗತಿ ಎನಿಸಿತು. ತಾಳ್ಮೆಯಲ್ಲ ದಣಿದಿತ್ತು. ಮಂದಬೆಳಕು ನನಗಿಷ್ಟು ಧೈರ್ಯ ತಂದಿತ್ತು. ಕೊಸರಾಡಿ; 'ಹೇಳಿ, ನನ್ನನ್ನು ಎಲ್ಲಿಗೆ ಕರೆದೊಯ್ಯುತ್ತಿರುವಿರಿ' ಎಂದೆ.

'ವಿಶ್ರಾಂತಿಯ ಕೋಣೆಗೆ'
'ಅಹಾ ಇಲ್ಲಿ, ಇಂತಹ ಕೂಪ ಗವಿಯಲ್ಲಿ ವಿರಾಮ ಸುಖವೇ'
'ನೀವು ನಿಮ್ಮ ಮನೋಬಲವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ'
'ನನಗೆ ಸಾಕಷ್ಟು ಮನೋಬಲವಿದೆ. ಸದಾಶಿವರಾಯರ ಬಳಿಗೆ ಕೊಂಡೊಯ್ಯಿರಿ'
'ಮೂರು ದಿನಗಳು ದಾಟಿದ ಮೇಲೆಯೇ ನೀವವರನ್ನು ಕಾಣಲು ಸಾಧ್ಯ'
'ಯಾಕೇ ಸ್ವತಃ ರಾಮರಾಯರೇ ನನಗೆ ಅನುಮತಿ ನೀಡಿದ್ದಾರೆ'
'ಆ ಅನುಮಿತಿಯ ಆದೇಶವನ್ನು ಪಾಲಿಸಬೇಕಾದ ರೀತಿಯಲ್ಲೆ ನಡೆದುಕೊಳ್ಳುತ್ತಿರುವೆ'
'ಅಂದರೆ ನಿಮ್ಮ ಮಾತಿನ ಅರ್ಥ....'
'ನೀವಿಲ್ಲಿ ಸಾಮಾನ್ಯ ಖೈದಿಯನ್ನು ಕಾಣಲು ಬಂದಿಲ್ಲ
ರಾಜಖೈದಿಯ ಆರೈಕೆಗೆ ಬಂದವರು. ಮೊದಲು ನಿಮ್ಮನ್ನು ತಕ್ಕುದಾಗಿ ಕಾಣಬೇಕಿದೆ.
ಆ ಮೇಲಿನದು ನಿಮ್ಮ ಮನೋಚಿಕಿತ್ಸೆ'
'ನನ್ನ ಬಗ್ಗೆ ಸಾಕಷ್ಟು ತಿಳಿದಂತಿದೇ....'
'ಇಲ್ಲಿಗೆ ಬರುವ ಪ್ರತಿಯೊಬ್ಬರ ಜಾತಕವೇ ನಮ್ಮ ಅಂಗೈಯಲ್ಲಿರುತ್ತದೆ'
'ಹಾಗಿದ್ದ ಮೇಲೆ ನೀವು ನನ್ನ ಬಗ್ಗೆ ಅನಗತ್ಯ ಗುಮಾನಿ ಇಟ್ಟಿರುವಂತಿದೇ'
'ಗುಮಾನಿಯು ಸತ್ಯ ಪರೀಕ್ಷೆಯಷ್ಟೇ. ಚರ್ಚಿಸುವ ಅಗತ್ಯವಿಲ್ಲ
ಈ ಕೋಣೆಯಲ್ಲಿ ವಿಶ್ರಮಿಸಿಕೊಳ್ಳಿ'

ಎಂದು ಹೇಳಿದವನೇ ಬಾಗಿಲು ಮುಚ್ಚಿಕೊಂಡು ಹೊರಟು ಹೋದ.

ನನಗೆ ದಿಕ್ಕೇ ತೋಚದಂತಾಯಿತು. ನಾನಾಗಿದ್ದು ನಾನೇ ಸೆರೆ ವಿಧಿಸಿಕೊಂಡೆ ಎನಿಸಿ ಮನಸ್ಸು ಘಾಸಿಯಾಯಿತು. ಮೂರು ದಿನಗಳ ಕಾಲ ಈ ಕತ್ತಲ ಕೋಣೆಯಲ್ಲಿ ಏನು ಮಾಡುವುದೆಂದು ಹೊಳೆಯದಾಯಿತು. ಕೊಠಡಿಯ ಮೂಲೆಯಲ್ಲಿ ಸಾಯುವ ಮುದುಕಿಯಂತೆ ದೀಪ ಕ್ಷೀಣವಾಗಿ ಉರಿಯುತ್ತಿತ್ತು. ಅವತ್ತು ರಾಜಬೀದಿಯಲ್ಲಿ ಕಂಡ ರಾಮರಾಯ ಎಷ್ಟು ಸರಳವಾಗಿದ್ದ.... ಈಗ ಈ ಕೋಣೆಯಲ್ಲಿ ಕತ್ತಲ ಹುಳುವಿನಂತೆ ಬಿದ್ದುಕೊಂಡಿರುವಾಗ ಮನದೆದುರು ಆತನನ್ನು ಕಲ್ಪಿಸಿಕೊಂಡರೇ ಭೀತಿ ಬಲವಾಗಿ ಹಿಡಿದು ಅದುಮಿ ಜೀವ ಹಿಂಡುತ್ತದೆ.... ಇದೇ ರೀತಿ ಅದೆಷ್ಟು ಜನರನ್ನು ಉಪಾಯದಲ್ಲಿ ರಾಮರಾಯ ಈ ನೆಲದಾಳದ ಸೆರೆಯಲ್ಲಿ ಬಂಧಿಸಿಟ್ಟಿರುವನೊ.... ಆದಿಲ್‌ಶಾಹಿಗಳ ಕಡೆಯ ಅನೇಕರನ್ನು ಆತ ಸೆರೆಯಾಗಿಸಿ ಕತ್ತಲಲ್ಲೆ ಕೊಳೆಸಿ ಕೊಲ್ಲಿಸಿರುವ ಸಂಗತಿಯ ದರ್ಶನ ನನಗೆ ನನ್ನ ಸ್ಥಿತಿಯಿಂದಲೆ ಉಂಟಾಗಿತ್ತು. ಭಾಗಶಃ ತಾನಿರುವ ಈ ಕೋಣೆಯಲ್ಲಿ ಅದ್ಯಾರ್‍ಯಾರು ಕೊನೆಯುಸಿರು ಬಿಟ್ಟರೋ ತಿಳಿಯದು. ವಿಪರೀತ ನೀರಡಿಕೆಯಾಗುತ್ತಿತ್ತು. ಕೂಗಿಕೊಂಡೆ. ಯಾರೂ ಬರಲಿಲ್ಲ. ಕಬ್ಬಿಣದ ಸರಳುಗಳು ನನ್ನನ್ನು ನೋಡಿ ನಗುತ್ತಿದ್ದವು. ಸುತ್ತಲೂ ಆವರಿಸಿದ್ದ ಬಂಡೆಗಲ್ಲುಗಳು ಇನ್ನೇನೋ ನಿನ್ನ ಮೇಲೆ ಬಿದ್ದು ಅಪ್ಪಚ್ಚಿಯಾಗಿ ತಿಂದುಬಿಡುತ್ತೇವೆ ಎಂಬಂತೆ ಹೆದರಿಸುತ್ತಿದ್ದವು.

'ಯಾರಾದರೂ ಒಂದಿಷ್ಟು ನೀರು ಕೊಡೀ.
ದಾಹ ತಡೆಯಲಾಗುತ್ತಿಲ್ಲ....
ಜೀವ ತಣಿಸಲು ಒಂದು ಬೊಗಸೆ ನೀರು ನೀಡಿ'

ಆಚೆ ಮರೆಯ ಕತ್ತಲಿನಲ್ಲಿದ್ದವರಿಗೆ ನನ್ನ ದನಿ ಕೇಳಿಸಿರಲೇಬೇಕು. ಇಂತಹ ಅಸಹಾಯಕ ಸ್ಥಿತಿಯಲ್ಲೇ ಗುಮಾನಿಗೊಲಪಟ್ಟವರ ಮನೋವ್ಯಾಪಾರವನ್ನು ದಂಡಿಸುವವರು ಪರೀಕ್ಷಿಸುವುದು. ಯಾರೊಬ್ಬರೂ ಬರಲಿಲ್ಲ. ನಿಜವಾಗಿಯೂ ದಾಹದಲ್ಲಿದ್ದಾಗ ಕೂಗುವ ಬದಲು ಮೊದಲೇ ದಾಹ ತೋರಿಕೊಂಡರೆ ಒಳಿತೆಂಬ ಹೊಳಹು ನನ್ನ ಮನಸ್ಸಿಗೆ ಬಂದು ಹಾಗೆ ವರ್ತಿಸಿದ್ದೆ. ನೆನ್ನೆಯಿಂದಲೂ ಗುಪ್ತದಳದವರು ನನ್ನ ಬೆನ್ನ ಹಿಂದೆ ಬಿದ್ದಿದ್ದು ಯಾಕೆಂದು ತಿಳಿಯಿತು. ಅಂತಹ ಮಂದಾರಳ ಸುಖದಲ್ಲಿದ್ದಾಗ ಯಾರೋ ಛೀತ್ಕಾರದಲ್ಲಿ ಓಡಿಹೋದದ್ದು ತನಗೆ ಬೇರೆಯದೇ ಸೂಚನೆ ಕೊಡಬೇಕಿತ್ತು. ಅದಕ್ಕೂ ಮೊದಲು ಓರ್ಮಸ್ ಜೊತೆ ನದಿ ದಂಡೆಯಲ್ಲಿ ಅಮಲು ತುಂಬಿದ ಹೊತ್ತಲ್ಲಿ ಸುಳಿದಾಡಿದ್ದ ನೆರಳುಗಳನ್ನೂ ಸರಿಯಾಗಿ ತಿಳಿಯಬೇಕಿತ್ತು. ಈಗ ಅರ್ಥವಾದರೇನು ಬಂತು ಎಂದು ಮತ್ತೊಮ್ಮೆ ಕೂಗಿಕೊಂಡೆ.

‘ದೀಪದ ಕುಡಿ ಅಳಿಯುತ್ತಿದೆ ಬನ್ನೀ<br>
ಕತ್ತಲಾಳದ ಕೂಪವನ್ನು ದೂಡಲಾರೆ ಬನ್ನೀ<br>
ಮಂದಾರ ಮನವೇ ಕಪ್ಪಾಗುತ್ತಿದೆ ಕಾಪಾಡ ಬನ್ನೀ’

ನಿಜಕ್ಕೂ ನನ್ನ ಮನೋಬಲವೇ ಕ್ಷೀಣಿಸುತ್ತಿದೆ ಎನಿಸಿ ಮತ್ತೆ ಮತ್ತೆ ಕೂಗಿದರೂ ಯಾರೂ ಕಿವಿಗೊಡದಾಗಲು ಕತ್ತಲಲ್ಲೇ ಬಿದ್ದುಕೊಂಡೆ. ಕಾ ಎನ್ನುವುದು ಇದೆಯೊ ಇಲ್ಲವೊ ಎಂಬುದೇ ತಿಳಿಯಲಿಲ್ಲ. ಮಂಪರು ಮೈದುಂಬಿತ್ತು. ನೆತ್ತಿಯಲ್ಲಿ ನಿದ್ದೆ ಮೂಡಿತ್ತು. ಮನಸ್ಸು ಪಾತಾಳಕ್ಕಿಳಿಯುತ್ತಿತ್ತು. ದೇಹವೆಲ್ಲ ದಣಿದಿತ್ತು. ಉಸಿರಾಟ ತೀವ್ರವಾಗಿತ್ತು. ಜಾಗೃತಾವಸ್ಥೆ ಮರೆಗೆ ಸರಿದಿತ್ತು. ಯಾವುದೋ ಲೋಕಕ್ಕೆ ಜಾರಿದ್ದೆ. ನಾನು ಕೃಷ್ಣಾನದಿಯಲ್ಲಿ ತೇಲಿ ಹೋದಂತಿತ್ತು. ಉಕ್ಕಿ ಹರಿಯುತ್ತಿದ್ದ ಆ ಹೆಮ್ಮಾರಿ ಹೊಳೆ ನಾಳಿನ ಯಾವುದೊ ಕ್ಷಣಕ್ಕಾಗಿ ಕಾತರಿಸುವಂತಿತ್ತು. ಬಹಮನಿ ಸುಲ್ತಾನರ ಸೈನ್ಯ ಕೇಕೆ ಹಾಕುತ್ತಿತ್ತು. ಸದಾಶಿವರಾಯನೇ ಮಹಾಶೌರ್ಯಶಾಲಿಯಾಗಿ ಎಡಬಲದ ಸೈನ್ಯಬಲವನ್ನು ಕಟ್ಟಿಕೊಂಡು ಮುನ್ನುಗ್ಗುತ್ತಿದ್ದ. ಆದಿಲ್‌ಶಾಹಿಗಳ ಸೈನ್ಯ ಫಿರಂಗಿ ದಳವನ್ನು ಮುಂದಿಟ್ಟುಕೊಂಡು ರಣಕಹಳೆಯನ್ನು ಭಯಂಕರವಾಗಿ ಕೂಗುತ್ತಿತ್ತು. ನಾನು ಸದಾಶಿವರಾಯನ ಬೆನ್ನ ಹಿಂದೆಯೇ ನಿಂತಿದ್ದೆ. ರಾಮರಾಯ ಬಲಭಾಗದ ರಕ್ಷಣಾ ಸೈನ್ಯವನ್ನು ಹುರಿದುಂಬಿಸುತ್ತಾ ಮದ್ದಾನೆಯ ಮೇಲೆಯೇ ನಿಂತು ಭಯಂಕರವಾದ ಕತ್ತಿಯನ್ನು ಜಳಪಿಸುತ್ತಿದ್ದ. ಎಲ್ಲೆಲ್ಲು ರಕ್ತ ಚೆಲ್ಲಿಡುತ್ತಿತ್ತು. ಬಹಮನಿ ಸುಲ್ತಾನರ ಸೈನಿಕರು ದಿಕ್ಕೆಟ್ಟಿದ್ದರು. ನಾನು ಈ ಯುದ್ಧದ ಹತ್ಯೆ ಇನ್ನು ಸಾಕೆಂದು ಸದಾಶಿವರಾಯನಿಗೆ ಹೇಳಬೇಕೆಂದುಕೊಂಡರೂ ಸಾಧ್ಯವಾಗುತ್ತಿರಲಿಲ್ಲ. ಮಾರಣಹೋಮವೇ ಇದಿರಬೇಕೆಂದು ನಾನು ಯುದ್ಧಭೂಮಿಯ ಆ ಹಿಂಸೆಯನ್ನು ತಾಳಲಾರದೆ ಓಡಿ ಹೋಗಬೇಕೆಂದು ಕಾಲ್ತೆಗೆದಿದ್ದೆ. ಯಾರೊ ಹಿಂದಿನಿಂದ ಬಂದು ಭರ್ಜಿಯಿಂದ ತಿವಿದರು. ಹ್ವಾ ಎಂದು ರಕ್ತಕಾರಿದಂತೆ ಕೂಗಿಕೊಂಡು ಎದ್ದೆ.

ಯಾರೊ ಭರ್ಜಿಯ ಮೊನೆಯಿಂದಲೇ ತಿವಿದು ಎಚ್ಚರಿಸಿದ್ದರು. ಯುದ್ಧದ ಬೀಭತ್ಸ ಕನಸು ನಗಾಡಿತ್ತು. ನೋಡಿದರೆ ಆ ಕ್ಷೀಣ ಬೆಳಕಲ್ಲಿ ಕಾವಲುಗಾರನೊಬ್ಬ ‘ಯಾಕೆ ಅರಚಿಕೊಳ್ಳುವೆ’ ಎಂದ. ನಾನೆಲ್ಲಿದ್ದೆನೆಂದು ಅರಿವಾಗಿ ‘ನೀರು ಬೇಕಿತ್ತು’ ಎಂದೆ. ‘ನೀನು ಮಲಗಿರುವ ಬಲಭಾಗ ಮೂಲೆಯಲ್ಲಿ ಒಂದು ತಂಬಿಗೆಯಲ್ಲಿ ನೀರಿದೆ ಕುಡಿ’ ಎಂದ. ಕತ್ತಲೆಯಲ್ಲಿ ಏನೂ ಗೋಚರವಾಗಿರಲಿಲ್ಲ. ‘ನೀರಿಲ್ಲದಿದ್ದರೂ ಚಿಂತೆ ಇಲ್ಲ, ಒಂದಿಷ್ಟಾದರೂ ಬೆಳಕು ನೀಡಿ’ ಎನ್ನುತ್ತ ಆತನನ್ನೆ ವಿನಂತಿಸಿದೆ. ‘ಇದು ಹಗಲಲ್ಲ ನಟ್ಟಿರುಳ ಹೊತ್ತು. ಈ ಅವೇಳೆಯಲ್ಲಿ ದೀಪದ ಚಿಂತೆ ಯಾಕೆ. ಸುಮ್ಮೆ ಮಲಗಿಕೊ’ ಎನ್ನುತ್ತ ಆತ ಮರೆಯಾದ. ಕಗ್ಗತ್ತಲ ಪ್ರಪಾತದಲ್ಲಿ ಕಾಲಭೇದವಿರುವುದಿಲ್ಲ. ಅಲ್ಲಿ ಹಗಲು ರಾತ್ರಿಗಳೆಲ್ಲ ಒಂದೇ ಎಂಬುದು ಖಚಿತವಾಯ್ತು. ನೆಲದಾಳದ ಈ ಕೂಪ ಸೆರೆಯಲ್ಲಿ ಕಾಯುವ ಈ ಸೈನಿಕರ ಕರ್ಮವನ್ನು ಏನೆಂದು ತಿಳಿಯುವುದು. ಇದನ್ನು ನಿಷ್ಠೆ ಎಂದು ಕರೆಯುವುದೇ.... ಸ್ವಯಂ ಶಿಕ್ಷಾ ಸುಖವೆಂದು ಭಾವಿಸುವುದೇ.... ಕ್ಷುದ್ರ ಜೀವನದ ಅಜ್ಞಾನವೆನ್ನಬಹುದೇ.... ಹಿಂಸೆಯ ಸವಿಯಲ್ಲಿ ಪರರ ಸುಖಕ್ಕಾಗಿ ಪರರ ಪ್ರಾಣ ಹಿಂಡಿ ವ್ಯರ್ಥವಾಗಿ ಪ್ರಾಣ ತ್ಯಾಗ ಮಾಡುವ ಅಮಾನುಷ ಆದರ್ಶವೆನ್ನಲೇ....

ಮತ್ತೆ ನಿದ್ದೆ ಬಾರದೆ ಹೊರಳಾಡಿದೆ. ಬಲ ಬದಿಯ ಮೂಲೆಯಲ್ಲಿದ್ದ ತಂಬಿಗೆಯ ತಳದಲ್ಲಿ ಒಂದಿಷ್ಟೇ ಇಷ್ಟು ನೀರಿತ್ತು. ಒಣಗಿದ್ದ ಗಂಟಲ ತೇವ ಮಾಡಿಕೊಂಡೆ. ಪ್ರಜ್ಞೆಯಲ್ಲೆ ಕಾಲವಿದೆ ಎಂದು ಕೇಳಿದ್ದೆ. ನಿಜವಿರಬೇಕು. ದೇಹದ ಒಳಗೇ ಕಾಲವ್ಯಾಪಾರ ನಡೆಯುತ್ತಿರುತ್ತದೆ. ಹಸಿವು ನಿದ್ದೆ ಎಚ್ಚರಗಳು ಕಾಲದ ಮೂರು ರೂಪಗಳಲ್ಲದೆ ಮತ್ತೇನು.... ಭಾಗಶಃ ಇದು ಕೋಳಿ ಕೂಗುವ ಹೊತ್ತಿರಬೇಕು.... ಯುದ್ಧದ ಕನಸಾದರೂ ಯಾಕೆ ಬಿತ್ತೋ.... ಎಚ್ಚರಗೊಳ್ಳುವ ವೇಳೆಯಲ್ಲಿ ರಣಕಹಳೆಯ ಸದ್ದು ಕನಸಲ್ಲಿ ಕೂಗಿದ್ದು ಒಳ್ಳೆಯ ಶಕುನವಲ್ಲ. ಅದರಲ್ಲೂ ಸೆರೆಯಲ್ಲಿರುವ ಸದಾಶಿವರಾಯ ಯುದ್ಧವನ್ನು ಮುನ್ನೆಡೆಸುತ್ತಿದ್ದಂತೆ ಕಾಣುವುದೆಂದರೇನು.... ಹೊರಳಾಡಿದೆ. ಪರಿತಪಿಸಿದೆ. ನೊಂದೆ. ನರಳಿದೆ. ದಿಕ್ಕು ತೋಚಲಿಲ್ಲ. ಕತ್ತಲಳಿಯಲಿಲ್ಲ. ಸೆರೆಯ ನಿಗೂಢ ತಿಳಿಯಲಿಲ್ಲ. ಸದಾಶಿವರಾಯ ಬದುಕಿರುವನೊ.... ಇಲ್ಲವೊ.... ಸುಮ್ಮನೆ ಯಾವನೊ ಒಬ್ಬನನ್ನು ಸದಾಶಿವರಾಯ ಇವನೇ ಎಂದು ತೋರುವರೇನೊ.... ಮುಗ್ಧಸ್ವಭಾವದ ಸದಾಶಿವರಾಯ ಇಂತಹ ಕೂಪ ಸೆರೆಯಲ್ಲಿ ಇಷ್ಟು ಕಾಲ ಬದುಕಿರಲಿಕ್ಕೆ

ಸಾಧ್ಯವಿಲ್ಲ. ರಾಜ ಬದುಕಿದ್ದಾನೆಂದು ತೋರಲು ರಾಮರಾಯ ನಕಲಿ ಸದಾಶಿವರಾಯನನ್ನು ಜನತೆಗೆ ತೋರುತ್ತಿರಬಹುದೇನೊ.... ಆತನ ಮನೋಚಿಕಿತ್ಸೆಗೆಂದು ತಾನು ಬಂದದ್ದೇ ತಪ್ಪಾಯಿತೇನೊ.... ನೋಡೋಣ, ಮೂರು ದಿನ ಕಳೆದ ಮೇಲೆ ಏನಾಗುವುದೆಂದು ಕಾಯೋಣ ಎಂದು ಎದ್ದು ಕೂತೆ.

ಈ ಹೊತ್ತಿಗಾಗಲೇ ಮೂಡಲಲ್ಲಿ ಸೂರ್ಯ ಮೂಡುತ್ತಿರಬೇಕೆನಿಸಿತು. ನನ್ನ ಯಾವತ್ತಿನ ಯೋಗ ಧ್ಯಾನಕ್ಕೆ ತೊಡಗಿದೆ. ಸೆರೆಮನೆ ಇನ್ನೂ ಗಾಢವಾದ ಮೌನದಲ್ಲಿತ್ತು. ಯೋಗದಲ್ಲಿ ಆಳವಾಗಿ ಇಳಿದೆ. ಅದರಲ್ಲಿ ಕತ್ತಲು ಬೆಳಕು ಎರಡನ್ನೂ ಮೀರಿದ ಸ್ಥಿತಿ ಕಾಣುವುದಿದೆ. ತನ್ನ ಪರಿಶ್ರಮದಲ್ಲಿ ತೊಡಗಿ ಸಾಧಿಸಿದವರಿಗೆ ಇವೆರಡರ ಆಚಿನ ನೀಲಿಮಯ ಲೋಕ ಕಾಣುತ್ತದೆ. ಕತ್ತಲು ಬೆಳಕು ಎರಡನ್ನೂ ನುಂಗಿರುವ ಆ ಸ್ಥಿತಿಯಲ್ಲಿ ಮನುಷ್ಯನ ನಿರ್ಮಿತ ಅರ್ಥಗಳೆಲ್ಲ ಕಳೆದುಹೋಗುತ್ತವೆ. ಸದಾಶಿವರಾಯನನ್ನು ಆ ಹಂತಕ್ಕೆಕೊಂಡೊಯ್ಯಲು ತನ್ನಿಂದ ಸಾಧ್ಯವೇ.... ಪ್ರಯತ್ನವೇ ದೊಡ್ಡ ಶಕ್ತಿ. ಆದದ್ದಾಗಲಿ. ಬಂದದ್ದೆಲ್ಲ ಬರಲಿ. ಬೆಳಕಿನ ವಾಸನೆ ಮೂಗಿಗೆ ಬಡಿಯಿತು. ಹೌದು; ಬೆಳಕನ್ನು ಧ್ಯಾನಿಸಿದರೆ ಅದರ ಸುವಾಸನೆ ಖಂಡಿತ ಅಂತರಂಗವನ್ನು ತಟ್ಟುತ್ತದೆ. ಕಣ್ಣು ಮುಚ್ಚಿ ಯೋಗದಲ್ಲೇ ತಲ್ಲೀನನಾಗಿದ್ದೆ. ಏನೋ ಸದ್ದಾಯಿತು. ಹೆಜ್ಜೆ ಸಪ್ಪಳ, ನಿತ್ಯ ಕರ್ಮಗಳಿಗೆಲ್ಲ ಇಲ್ಲಿ ಯಾವ ದಾರಿಯಿದೆ ಎಂದು ಯೋಚಿಸಿದೆ. ಕೆಲವರು ಮಂದ ಬೆಳಕಲ್ಲಿ ತಿರುವಿನ ಮರೆಯಲ್ಲಿ ಕಂಡರು. ಸ್ವಲ್ಪ ಹೊತ್ತಾದ ಮೇಲೆ ಯಾರೊ ಬಂದು ಕಲ್ಲಿನ ಬಾಗಿಲನ್ನು ಸರಿಸಿದರು. ಹೊರಬರುವಂತೆ ನುಡಿದರು. ಅವರನ್ನೆ ಹಿಂಬಾಲಿಸಿದೆ. ಸ್ವಲ್ಪ ಹಗುರಾಯಿತು. ಮೂರು ಸುತ್ತಿನ ಸರಳ ಸುರಂಗ ದಾರಿಯನ್ನು ದಾಟಿದ ಕೂಡಲೆ ನನಗೆ ಬೆರಗಾಗಿತ್ತು. ಎಳೆ ಬಿಸಿಲು ಅಲ್ಲಿ ಹಬ್ಬಿತ್ತು. ವಿಶಾಲವಾದ ಗವಿ ಅದಾಗಿತ್ತು. ಇದು ಮನುಷ್ಯ ನಿರ್ಮಿತವೊ ಎಂಬಷ್ಟು ಸುಸಜ್ಜಿತವಾಗಿತ್ತು. ತಿಳಿಗೊಳವು ನಡುಮಧ್ಯದಲ್ಲಿತ್ತು. ಸುರಂಗದ ಸುತ್ತು ಬಳಸಿನ ದಾರಿಯನ್ನು ದಾಟಿ ಬರುವಾಗಲೇ ನೀರ ಒರತೆಯು ಕಾಲಿಗೆ ತಾಕಿತ್ತು. ಎಲ್ಲೆಲ್ಲೊ ಜಿನುಗಿ ಬರುವ ನೀರು ತಿಳಿಗೊಳವ ಸೇರಿ ಜೀವದ ಮಾಯಾಲೋಕವನ್ನು ಸೃಷ್ಟಿಸಿತ್ತು. ಜಲವಿದ್ದಲ್ಲಿ ಜೀವ ಇರಬೇಕಲ್ಲವೇ.... ಆ ಜಲಗೊಳದಲ್ಲಿ ಮುಳುಗಿ ಈಜಾಡಲೇ ಎಂಬಷ್ಟು ಸಡಗರ ಮೂಡಿತು. ಈ ಮಾಯದ ಬೆಳಗು ಎಲ್ಲಿಂದ ಒಳಬಂದಿತೊ ಎಂದು ತಲೆ ಎತ್ತಿ ಸುತ್ತಲು ನೋಡಿದೆ. ಪರ್ವತದ ಬಂಡೆಗಲ್ಲುಗಳ ಶಿಖರದ ಹತ್ತಾರು ಕಿಂಡಿಗಳಿಂದ ಬೆಳಕು ನುಗ್ಗಿ ಪ್ರತಿಫಲಿಸಿ ಪ್ರತಿಫಲನದ ಮೇಲೆ ಪ್ರತಿಫಲನಗಳು ಕೂಡಿ ನೀಲಿಮಯ ಬೆಳಕು ಅಲ್ಲೆಲ್ಲ ಸೂಸುವಂತಾಗಿತ್ತು. ಕೊಳದಲ್ಲಿಳಿದು ಯಾರೂ ಈಜಾಡುವಂತಿರಲಿಲ್ಲ. ಒಂದೇ ವೇಳೆಗೆ ನೂರಾರು ಜನ ಅಲ್ಲಿ ವಿರಮಿಸುವಷ್ಟು ವಿಸ್ತಾರ ಆವರಣವಿತ್ತು.

ಸೆರೆಮನೆಯೊಳಗಿರುವೆ ಎಂಬುದೇ ಮರೆತು ಹೋಗಿತ್ತು. ದಿವ್ಯವಾದ ಯಾವ ತಾಣ ಇದಾಗಿತ್ತೊ ಏನೊ.... ಈಗ ಇದು ಸೆರೆಯ ನರಕವಾಗಿದೆ ಎನಿಸಿ ದಾಹ ತೀರುವಷ್ಟು ನೀರನ್ನು ಮೊಗೆ ಮೊಗೆದು ಕುಡಿದೆ. ನನ್ನಂತೆಯೇ ಹತ್ತಾರು ಜನ ಅಲ್ಲಿದ್ದರು. ಭಾಗಶಃ ಅವರು ರಾಜಖೈದಿಗಳೇ ಇರಬೇಕು. ಸದಾಶಿವರಾಯನನ್ನು ಇಲ್ಲಿಗೆ ಕರೆತರುವರೊ ಎಂದು ನನ್ನ ಬಳಿಯೇ ಇದ್ದ ಸೈನಿಕನನ್ನು ಕೇಳಿದೆ. ಇಲ್ಲ ಎಂದು ಆತ ತಲೆ ಆಡಿಸಿದ. ಸ್ನಾನಾದಿಗಳನ್ನೆಲ್ಲೆ ಮಾಡಲು ತಿಳಿಗೊಳದ ಪಕ್ಕದಲ್ಲೇ ವ್ಯವಸ್ಥೆಯಿತ್ತು. ಬಹಳ ಹೊತ್ತಿನಕ ತನಕ ಮಜ್ಜನದಲ್ಲಿ ಮುಳುಗುವಂತಿರಲಿಲ್ಲ. ಭಾಗಶಃ ನೆನ್ನೆಯ ಇದೇ ವೇಳೆಯಲ್ಲೇ ಇರಬೇಕೂ.... ದೋಣಿಯಲ್ಲಿ ಹಣ್ಣುಹಂಪಲು ಹೇರಿಕೊಂಡು ಸಂತೆಗೆ ಹೊರಟಿದ್ದ ಕಪ್ಪುಚೆಲುವೆ ನನ್ನನ್ನು ನೋಡಿ ನಗಾಡಿದ್ದು.... ಅಂತಹ ನೆನಪಿನ ಜೀವನಾಡಿಯೇ ಇಲ್ಲದಿದ್ದರೆ ತಾನು ಉಸಿರಾಡಿದ್ದಕ್ಕೆ ಏನು ಬಂತು ಎಂದುಕೊಂಡು ತೂರಿ ಬರುತ್ತಿದ್ದ ಬೆಳಕಿನ ಮೂಲಗಳ ಕಡೆಯೇ ದೇವರನ್ನು ಕಂಡಂತೆ ದಿಟ್ಟಿಸಿದೆ. ಭೀಕರ ಕೂಪದಲ್ಲೂ ಎಂತಹ ಸೌಂದರ್ಯದ ತಿಳಿಬೆಳಕಿನ ಕೊಳವಿದೆಯಲ್ಲಾ ಎನಿಸಿ ವಿಶ್ವಾಸ ಬಂತು. ಅಲ್ಲಿದ್ದವರನ್ನು ಗುರುತು ಹಿಡಿಯಲು ಸಾಧ್ಯವಾಗಲಿಲ್ಲ. ಅವರಾರೂ ಕೂಡ ನನ್ನನ್ನು ಕಂಡಂತಿರಲಿಲ್ಲ. ಅಷ್ಟೊಂದು ಕ್ರೂರವಾಗಿದ್ದ ನೆನ್ನೆಯು ಈಗ ಇಷ್ಟೊಂದು ಸುಂದರವಾಗಿದೆಯೆಲ್ಲಾ ಎನಿಸಿ ಇಲ್ಲೇ ಈ ತಿಳಿ ನೀಲಿ ಬೆಳಕಿನ ಕೊಳದ ಬಳಿಯೇ ಸದಾಶಿವರಾಯನನ್ನು ಚಿಕಿತ್ಸೆಗೆ ಒಳಪಡಿಸಬಹುದು ಎಂದು ನಿಶ್ಚಯಿಸಿದೆ.

ಆದರೂ ಇಂತಲ್ಲಿ ಯಾವುದೂ ನಿರ್ಧರಿಸಿದಂತೆ ನಡೆಯದು. ಮುಂದಿನ ಕ್ಷಣ ಏನೆಂದು ಯೋಚಿಸುವ ಬದಲು ಈ ಕ್ಷಣಕ್ಕೆ ಯಾವ ಪರಿಹಾರ ಕಂಡುಕೊಳ್ಳಬೇಕು ಎಂಬುದೇ ನ್ಯಾಯೋಚಿತ ಆಯ್ಕೆ. ಇರುವ ಸೀಮಿತ ಅವಕಾಶದಲ್ಲೇ ಅಸಾಧ್ಯವಾದದ್ದನ್ನು ಕಂಡುಕೊಳ್ಳಬೇಕು ಎಂದುಕೊಂಡೆ. ಕತ್ತಲ ಕೋಣೆಯ ಕಡೆಗೆ ಹಿಂತಿರುಗಬೇಕಾಯಿತು. ತಿನ್ನಲು ಸಜ್ಜೆಗಂಜಿಯನ್ನು ನೀಡಿದರು. ಹಸಿದಾಗ ಹಳಸಿದ್ದು ಕೂಡ ಮೃಷ್ಟಾನ್ನವೇ. ಒಂದು ಬಟ್ಟಲು ತುಂಬ ಕುಡಿದೆ. ಮಂದಾರ ನೆನಪಾದಳು. ಆಕೆಯ ತಾಯಿಯನ್ನು ನೋಡಲಾಗಲೇ ಇಲ್ಲ. ಅವಳನ್ನು ಕಂಡು ವಿಶ್ವಾಸ ಸಂಪಾದಿಸಬೇಕಿತ್ತು ಎಂದು ಲೆಕ್ಕಿಸುತ್ತಿರುವಂತೆಯೇ ಇಲ್ಲಿ ತನಗೆ ನಿಜವಾಗಿಯೂ ಬಿಡುಗಡೆ ಇದೆಯೇ ಎಂದು ಆಲೋಚಿಸಿದೆ. ಕತ್ತಲಲ್ಲಿ ಮುಳುಗಿದ ಮೇಲೆ ವಿಷಾದ ಆವರಿಸಿತು. ಭಾಗಶಃ ಸಜ್ಜೆಗಂಜಿಗೆ ಅಫೀಮಿನ ರಸ ಬೆರೆಸಿದ್ದಿರಲೇ ಬೇಕು. ಮಾಯದ ನಿದ್ದೆ ತಲೆ ಮೇಲೆ ಕೂತು ಕಣ್ಣುಮುಚ್ಚಿಕೊ ನಿನ್ನ ಕುಕ್ಕಿ ತಿನ್ನಬೇಕು ಎಂಬಂತೆ ದೇಹವನ್ನು ಮೆತ್ತಗೆ ಮಾಡುತ್ತಿತ್ತು. ರಾಮರಾಯನ ಹಿಂದೆ

ವಿಷಕನ್ನೆಯರ ಮೂಲಕ ರಾಜತಾಂತ್ರಿಕರಿಗೆ ವಿಷ ಕುಡಿಸಿದಂತೆಯೇ ತನಗೂ ಏನಾದರೂ ಮಾಡಿರಬಹುದೇ ಎಂದು ನನ್ನ ಆತ್ಮವನ್ನೆ ಕೇಳಿಕೊಂಡೆ. ತಕ್ಷಣ ಉತ್ತರ ಹೊಳೆಯಲಿಲ್ಲ. ಅತ್ಯಂತ ಸುಲಭವಾಗಿ ಕೊಲ್ಲಬಹುದಿದ್ದ ತನಗೆ ಹೀಗೆ ಉಪಾಯದಲ್ಲಿ ಕೊಲ್ಲಿಸುವ ಅಗತ್ಯವಿರಲಿಲ್ಲ. ಅಲ್ಲವೇ.... ಎಂದುಕೊಳ್ಳುತ್ತ ಮಗ್ಗುಲ ಬದಲಿಸಿದೆ.

ಓರ್ಮಸ್, ಮಜೀದ್, ಓಗರ್, ಸ್ಯೂಸ್, ಅಪಾಚಿಯೊ ನೆನಪಾದರು. ಓರ್ಮಸ್ ಆ ಚಿನ್ನದ ಚಿತ್ತಾರವಿರುವ ಚಾದರವನ್ನು ಎದೆ ಮೇಲೆ ಹೊದ್ದುಕೊಂಡು ಎಲ್ಲಿ ಮಲಗಿರುವನೊ ಎಂದು ಕಲ್ಪಿಸಿಕೊಂಡೆ. ನಡುಗಡ್ಡೆಯ ಸುಂದರ ಕುಟೀರದಲ್ಲಿ ಉಳಿದುಕೊಂಡಿರುವರೂ ಏನೊ.... ಸ್ನೇಹಿತ ವಿನಯದತ್ತ ಆ ಕೆಲಸ ಮಾಡಿರುತ್ತಾನೆಂದುಕೊಂಡೆ. ಸುರಂಗದಿಂದ ತಪ್ಪಿಸಿಕೊಂಡು ಹೊರಗೆ ಹೋದ ಕೂಡಲೆ ಅರಮನೆಯ ಒಳದಾರಿಯಲ್ಲೆ ತನ್ನನ್ನು ಮುಗಿಸಿಬಿಡುವರೆಂದು ಭಯಗೊಂಡೆ. ಛೇ, ಈ ಭಯ, ಅನುಮಾನ, ದುಃಖ, ಸಾವು ಇವನ್ನೆಲ್ಲ ಮೀರುವುದು ಹೇಗೆ.... ಅವು ಇವೆ ಎಂಬ ನಂಬಿಕೆಯನ್ನೇ ಬಿಟ್ಟುಬಿಡಬೇಕು. ಅವುಗಳ ಬಲೆಗೆ ಒಮ್ಮೆ ಬಿದ್ದೆವೆಂದರೆ ಕೊನೆ ತನಕ ಅವು ನಮ್ಮನ್ನು ಬೇಟೆಯಾಡುತ್ತವೆ. ಸದಾಶಿವರಾಯ ಇವುಗಳಿಂದಲೇ ಹುಚ್ಚಾಗಿರುವುದು. ಅಥವಾ ಇಂತವನ್ನು ಲೆಕ್ಕಿಸದೇ ಹಿಂಸೆಯ ಮೂಲಕವೇ ರಾಜ್ಯವಾಳಲು ಮುಂದಾಗಿರುವ ಸದಾಶಿವರಾಯ ಅನೇಕರನ್ನು ಗೆದ್ದುಕೊಂಡಿರುವುದು. ಪ್ರಪಾತಕ್ಕಿಳಿದಂತೆ ಮನಸ್ಸು ಜಾರುತ್ತಿತ್ತು. ದುಸ್ವಪ್ನಗಳು ಬಾರದಿರಲಿ ಎಂದು ಪ್ರಾರ್ಥಿಸಿದೆ. ಮನಸ್ಸಿಗೆ ಯಾವ ಬಾಗಿಲುಗಳೂ ಕೋಟೆಗಳೂ ಇಲ್ಲ. ಅಲ್ಲಿಗೆ ಯಾವುದಾದರೂ ಎಂತಹ ವೇಳೆಯಲ್ಲಾದರೂ ಬರಬಹುದು, ಹೋಗಬಹುದು; ಶಾಶ್ವತವಾಗಿ ತಳದಲ್ಲೆ ಉಳಿದುಬಿಡಬಹುದು ಎನ್ನುತ್ತ ಕೇಡು ಮನದೊಳಗೆ ಬೇರು ಬಿಡದಿರಲಿ ಎಂದು ನನ್ನ ಆತ್ಮಕ್ಕೆ ನಾನೇ ಸೂಚನೆ ಕೊಟ್ಟುಕೊಂಡೆ. ಯೋಗೀಂದ್ರ ಮುನಿಯ ಪ್ರಭಾವವಿದು.

ಕಾಲಾತೀತ ಸ್ಥಿತಿಯಲ್ಲಿ ಕಳೆದು ಹೋಗುತ್ತಿದ್ದೆ. ನಿದ್ದೆಯ ಅಮಲು ನನ್ನನ್ನು ಅದುಮಿ ಮಲಗಿಸುತ್ತಿತ್ತು. ಕತ್ತಲೆಯೊಳಗೆ ಹೆಜ್ಜೆ ಸಪ್ಪಳ ಆಗಾಗ ಕೇಳಿ ಬರುತ್ತಿತ್ತು. ಭಾಗಶಃ ಈ ಸೆರೆಮನೆಯ ತಳದಲ್ಲಿ ಸದಾಶಿವರಾಯನನ್ನು ಅಡಗಿಸಿಟ್ಟಿರಬೇಕು. ಕೊಳದ ಎಡಭಾಗದಲ್ಲೊಂದು ಸುರಂಗ ದಾರಿ ಇದ್ದುದನ್ನು ಗಮನಿಸಿದ್ದೆ. ಅಲ್ಲಿ ಕೆಳಕ್ಕೆ ಇಳಿಯುತ್ತಿದ್ದವರು ನೆರಳಂತೆ ಮರೆಯಾಗಿದ್ದರು. ಹಿಂದೆ ಸದಾಶಿವರಾಯ ಅರಮನೆಯ ಒಳ ಕೋಣೆಯಲ್ಲೇ ಬಂಧಿಯಾಗಿದ್ದನ್ನು ಒಮ್ಮೆ ಕಂಡಿದ್ದೆ. ಈಗಲೂ ಹಾಗೆಯೇ ಇದೆ ಎಂದುಕೊಂಡಿದ್ದೆಲ್ಲ ಸುಳ್ಳಾಗಿತ್ತು. ಆತನ ಮಡದಿ ಮಕ್ಕಳನ್ನು ಎಲ್ಲಿ ಬಚ್ಚಿಟ್ಟಿರುವರೊ ಎಂದು ಊಹಿಸಿದೆ. ಇಲ್ಲೇ ಎಲ್ಲೊ ಅಡಗಿಸಿದ್ದರೆ ಆಶ್ಚರ್ಯವಿಲ್ಲ. ನೆರಳುಗಳು ಸುರಂಗದಲ್ಲಿ ಅಡ್ಡಾಡುತ್ತಿದ್ದವು. ನಿರ್ಜೀವ ಶವಗಳ ಛಾಯೆಯೇ ಅವಿರಬೇಕೇನೊ.... ಇರಿವ ಸುಖದಲ್ಲಿ ಇರಿಸಿಕೊಳ್ಳುವ ಪರಿಯಲ್ಲಿ ಅಡ್ಡಾಡುವ ಈ ನೆರಳುಗಳಿಗೆ ಮುಕ್ತಿಯೇ ಇಲ್ಲವೇ.... ಎಷ್ಟೋ ಹೊತ್ತಿನ ತನಕ ನಿದ್ದೆಯನ್ನು ತಡೆದಿದ್ದೆ. ವಿಷವನ್ನೇನು ಗಂಜಿಯಲ್ಲಿ ಬೆರೆಸಿರಲಿಲ್ಲ. ಯಾರು ಕೂಡ ಬಂದು ಭೀತಿ ಹುಟ್ಟಿಸಿರಲಿಲ್ಲ. ಹಗಲಿನ ಎಷ್ಟೊ ಸಮಯ ಕತ್ತಲಾಗಿಯೇ ಕಳೆದು ಹೋಗಿತ್ತು. ನೆತ್ತಿಯಲ್ಲಿ ಸಮಯ ಪ್ರಜ್ಞೆ ಸುತ್ತುತ್ತಿತ್ತು. ಸುತ್ತುವ ಆಕಾಶ ಕಾಯಗಳ ಚಲನೆ ನನ್ನೊಳಗೂ ಅನುರಣಿಸುತ್ತಿತ್ತು. ಸಂಜೆ ಸಮೀಪಿಸುತ್ತಿದೆ ಎಂದುಕೊಂಡೆ. ಹೊರಳಾಡಿ ತೊಳಲಾಡಿ ನಿಟ್ಟುಸಿರುಬಿಟ್ಟೆ. ತಡೆಯಲಾರದೆ ನಿದ್ದೆಗೆ ಶರಣಾದೆ. ಮಾಯದ ನಿದ್ದೆ ನನ್ನೆದೆ ಮೇಲೆ ಬಂದು ಕೂತುಕೊಂಡಿತ್ತು. ನೆಲದಾಳದಿಂದ ಏನೊ ಗುಡುಗಿದಂತೆ ಸದ್ದಾಯಿತು. ಅದು ಹೊರಗಿನ ಆಕಾಶದ ಗುಡುಗೊ ಇಲ್ಲವೇ ಮತ್ತಾವ ರಾಕ್ಷಸ ಫಿರಂಗಿಯ ಗುಂಡಿನ ಸದ್ದೋ ತಿಳಿಯಲಿಲ್ಲ. ಒಮ್ಮೆ ಇಡೀ ಸುರಂಗದ ಕೂಪವೇ ಅಲುಗಾಡಿದಂತಾಯಿತು. ಭೂಕಂಪವೇನಾದರೂ ಆಗುತ್ತಿದೆಯೇ ಎಂದು ಎದ್ದು ಕೂರುವಾ ಎಂದರೆ ಕೈಕಾಲನ್ನೂ ಆಡಿಸಲು ಆಗದಂತೆ ಇಡೀ ದೇಹ ಮರಗಟ್ಟಿತ್ತು. ನಾಳೆಯನ್ನು ನೋಡುವೆನೊ ಇಲ್ಲವೊ ಎಂಬಂತೆ ಹಾಗೇ ಬಿದ್ದುಕೊಂಡೆ. ಕಂಪಿಸುವ ಸೆರೆಮನೆ ನನ್ನ ಜೀವದ ಜೊತೆ ಸರಸವಾಡುತ್ತಿತ್ತು.

## ೨

# ಸದಾಶಿವರಾಯನ ವಿಕಟ ವಿಲಾಸ

ಆ ನೆರಳ ದನಿಯ ಗುರುತು ಹಿಡಿದ ಕೂಡಲೆ ನನಗೆ ಆನೆ ಬಲ ಬಂದಿತು. ಸದಾಶಿವರಾಯ ಬದುಕಿರುವುದು ಖಾತ್ರಿ ಆಯಿತು. ನಾನು ತಿಳಿದಿದ್ದು ಒಂದಾದರೆ ಇಲ್ಲಿರುವುದೇ ಮತ್ತೊಂದು ಎಂದು ವಿಹ್ವಲನಾದೆ. ನೆರಳು ದೈತ್ಯಾಕಾರವಾಗಿ ಸುತ್ತಿಕೊಳ್ಳುತ್ತಿತ್ತು. ಅದು ನನ್ನನ್ನೆ ನುಂಗುವಂತೆ ಅಬ್ಬರಿಸುತ್ತಾ ಕೇಕೆ ಹಾಕಿತು. ಅಂತಹ ಭಯಾನಕ ನಗೆಯನ್ನು ನಾನೆಂದೂ ಕೇಳಿರಲಿಲ್ಲ. ಇದು ಮಾಯಾ ಕೂಪವೇ ಇರಬೇಕು. ಸಾಮ್ರಾಜ್ಯದ ಆಸೆಯಲ್ಲಿ ಮಡಿದವರೆಲ್ಲರ ಪಿಶಾಚಿಗಳು ಒಂದಾಗಿ ನನ್ನನ್ನು ಕಬಳಿಸಲು ಮುಂದಾಗುವಂತಿತ್ತು. ನಾನ್ಯಾವ ಸೀಮೆಯ ಸಾಮ್ರಾಜ್ಯ.... ಯಕಶ್ಚಿತ್ ತುಂಗಭದ್ರಾ.... ಗೊತ್ತು ಗುರಿಯಿಲ್ಲದೆ ದಿಕ್ಕೆಟ್ಟು ಕೂಪದಲ್ಲಿ ಹುಳುವಾಗಿ ಬಿದ್ದವನ ಮೇಲೆ ಈ ನೆರಳಿನಾಟಕ್ಕೆ ಯಾವ ದಿಗ್ವಿಜಯದ ಭ್ರಮೆಯೊ.... ನೆರಳು ನನ್ನ ಕಠಾರಿಯಿಂದ ರೌದ್ರಾವತಾರದ ಆವೇಶದಲ್ಲಿ ಕತ್ತಿಯನ್ನು ರಭಸವಾಗಿ ಎಳೆದು ಬಲವಾಗಿ ಬೀಸಿತು. ಕತ್ತಿಯ ಮೊನೆ ಬಂಡೆಗೆ ಬಡಿದು ತೀಕ್ಷ್ಣವಾದ ಸದ್ದು ಮಾಡಿತು. ಅದರ ಹೊಡೆತಕ್ಕೇನಾದರೂ ನನ್ನ ರುಂಡ ಸಿಕ್ಕಿದ್ದರೆ ಕ್ಷಣ ಮಾತ್ರದಲ್ಲಿ ತುಂಡಾಗಿ ಉರುಳುತ್ತಿತ್ತು. ಮಾಯಾವಿಯಂತೆಯೆ ತಪ್ಪಿಸಿಕೊಂಡಿದ್ದೆ. ಮತ್ತೊಮ್ಮೆ ನೆರಳು ನೆಗೆದು ಬಂದು ಬೀಸಿತು. ನೆರಳ ಕಾಲಸಂಧಿಯಿಂದಲೇ ಕೂಪದ ಸುರಂಗದ ಮೂಲೆಗೆ ಹಾರಿ ಹೋದೆ. ಅಲ್ಲಿಗೂ ನೆರಳು ಧಾವಿಸಿತು. ಎಲ್ಲ ಬಲವನ್ನೂ ಒಗ್ಗೂಡಿಸಿಕೊಂಡು ಬಲವಾದ ಉದ್ದನೆಯ ಆ ಕತ್ತಿಯನ್ನು ನೇರ ನನ್ನ ಎದೆಗೇ ನಾಟುವಂತೆ ನೆರಳು ನುಗ್ಗಿ ಬಂತು. ಯೋಚಿಸಲು ನನಗೆ ಕ್ಷಣವೊಂದೂ ಇರಲಿಲ್ಲ. ಅತ್ತಿತ್ತ ಏನಿದೆ ಎಂಬುದೂ ಕಾಣುತ್ತಿರಲಿಲ್ಲ. ಕತ್ತಿಯು ತಿವಿದೇ ಬಿಟ್ಟಿತು ಎನ್ನುವಷ್ಟರಲ್ಲಿ ನಾನು ಮಿಂಚಿನ ವೇಗದಲ್ಲಿ ನೆಲವನ್ನು ಅಪ್ಪಿ ಮಲಗಿಬಿಟ್ಟಿದ್ದೆ. ಸುರಂಗದ ಗೋಡೆಗೆ ಕತ್ತಿಯು ನಾಟಿಕೊಂಡಿತ್ತು. ಹೋರಾಡದೆ ಅನ್ಯಮಾರ್ಗವಿರಲಿಲ್ಲ. ತಟ್ಟನೆ ಮೇಲೇಳುವುದಕ್ಕೂ ನೆರಳಿಗೆ ಡಿಕ್ಕಿ ಹೊಡೆದುಕೊಂಡು ಬಿದ್ದೆ. ಗೋಡೆಗೆ ಕಚ್ಚಿಕೊಂಡಿದ್ದ ಕತ್ತಿಯನ್ನು ಕಿತ್ತುಕೊಂಡೆ.

ನೆರಳನ್ನು ತುಂಡು ತುಂಡು ಮಾಡಲು ನಿರ್ಧರಿಸಿದೆ. ಮಾಯಾವಿ ನೆರಳು ಮತ್ತೆ ವಿಕಟ ನಗೆಯನ್ನು ಬೀರುತ್ತ ಘರ್ಜಿಸಿತು. ಕೂಪದ ಯುದ್ಧತಂತ್ರಗಳೆಲ್ಲವೂ ವಾಮಮಾರ್ಗದವು. ಎದುರಾಳಿಯ ನೆತ್ತರು ಕುಡಿಯುವ ತನಕ ಶತ್ರುಗಳ ಕತ್ತಿಗಳು ತಣಿಯವು. ನೆರಳಿನೊಡನೆ ಸೆಣಸಾಡುವುದು ರಣರಂಗದಲ್ಲಿ ಹೋರಾಡಿದಂತಲ್ಲ. ಮೃತ್ಯುವಿನ ಜೊತೆ ಕಾಳಗವಾಡುವುದಷ್ಟೇ ತನಗೀಗ ಉಳಿದಿದ್ದ ಮಾರ್ಗ. ಮೈಯೆಲ್ಲ ಕಣ್ಣಾಗಿಸುವ ಬದಲು ಮನವೆಲ್ಲವೂ ಕಣ್ಣೇ ಆಗಿಬಿಡುವ ಸ್ಥಿತಿಯನ್ನು ಆವಾಹಿಸಿಕೊಂಡೆ. ಪ್ರಜ್ಞೆಯ ಸೂಚನೆಯಂತೆ ಕತ್ತಿಯನ್ನು ಬಳಸಬೇಕಿತ್ತು. ಚಾಣಕ್ಯ ತಂತ್ರವೆಂದರೆ ಇದೇ ಇರಬೇಕು. ಎಂದುಕೊಳ್ಳುತ್ತಿರುವಲ್ಲೇ ಕತ್ತಿಯೊಂದು ಬೀಸಿ ಬಂದು ನನ್ನ ತಲೆಯೇ ಮೇಲೆಯೇ ಹಾರಿ ಹೋಯಿತು. ಆ ಕಡೆ ಏನೋ ಸದ್ದಾಯಿತೆಂದು ತಿರುಗಿ ನೋಡುವಷ್ಟರಲ್ಲಿ ಪಾರಾಗಿದ್ದೆ. ಅಷ್ಟೊಂದು ನಿತ್ರಾಣನಾಗಿದ್ದ ನನಗೆ ದೈತ್ಯ ಬಲ ಹೇಗೆ ಬಂತೊ ತಿಳಿಯಲಿಲ್ಲ. ಮಾಯವಿಯಂತೆಯೇ ನುಗ್ಗಿ ಕತ್ತಿ ಬೀಸಿದೆ. ನೆರಳು ಸುರಂಗದ ಕೊರಕಲು ಇಳಿಜಾರಿನಲ್ಲಿ ಉರುಳಿಕೊಂಡು ಬಿದ್ದಿತು. ಬಲವಾಗಿ ಪೆಟ್ಟು ಬಿದ್ದಂತೆ ನರಳಿತು. ಉಸಿರು ಬಿಗಿ ಹಿಡಿದು ಕೊರಕಲಿನ ಕಡೆ ಗಾಳಿಯಂತೆ ಸಾಗಿದೆ. ಎರಗಿ ಬಂದಂತೆ ದೊಪ್ಪೆಂದು ನನ್ನ ಮೇಲೆ ಬಿದ್ದು ಕೊರಳನ್ನು ನುಲಿದು ಇನ್ನೊಂದೇ ಕ್ಷಣದಲ್ಲಿ ಮುರಿದು ಬಿಡಲು ಎರಡೂ ಕೈಗಳನ್ನು ನೆರಳು ಬಳಸಿತು. ಅದು ನರಳಿದ್ದು ನನ್ನನ್ನು ವಂಚಿಸಲು ಎಂದು ತಿಳಿಯಿತು. ಅದರ ಮರ್ಮಾಂಗಕ್ಕೆ ಮಂಡಿಯಿಂದ ತಿವಿದೆ. ಬಿಗಿ ಸಡಿಸಲಿಲ್ಲ. ಆರ್ಭಟಿಸುವ ಅದರ ಅಬ್ಬರ ರಕ್ತ ಹೀರುವಂತಿತ್ತು. ಉದ್ದವಾಗಿದ್ದ ಆ ಕತ್ತಿಯನ್ನು ಇಕ್ಕಟ್ಟಿನ ಸ್ಥಿತಿಯಲ್ಲಿ ಬಳಸುವಂತಿರಲಿಲ್ಲ. ಶಕ್ತಿಮೀರಿ ಕಿತ್ತೊಂಡೆದ್ದು ಕತ್ತಿ ಬೀಸಿದೆ. ಗುರಿ ತಪ್ಪಿತು. ನೆರಳು ತಪ್ಪಿಸಿಕೊಳ್ಳಲು ಓಡಿತು. ಓಂಬಾಲಿಸಿದೆ. ತಿರುವು ಮುರುವು ಮಾಯಾ ಜಾಲದ ಹಾದಿಯಲ್ಲಿ ಶಬ್ಧ ತರಂಗಗಳೇ ದಾರಿ ತೋರಿದವು. ನೆರಳು ಒಂದೇ ಬಾರಿಗೆ ನೆಗೆದು ಭೀತ್ಕಾರದಲ್ಲಿ ಮಾಯವಾಯಿತು. ತಾನೂ ಕೂಡ ಹಾಗೆಯೇ ಮಾಡಿದೆ. ವಿಚಿತ್ರ ವಿಸ್ಮಯ ಎಂದರೆ ಇದೇ ಇರಬೇಕು. ನಾನೊಂದು ಪುಟ್ಟ ಕೊಳದಲ್ಲಿ ಬಿದ್ದಿದ್ದೆ. ನೆರಳು ಎಲ್ಲಿಯೂ ಕಾಣಲಿಲ್ಲ. ಅಲ್ಲೀಗ ಮಂದವಾದ ಬೆಳಕಿತ್ತು. ಪನ್ನೀರ ಕೊಳದ ನೀರ ಮೊಗೆ ಮೊಗೆದು ಕುಡಿದೆ.

ಹೊಸ ಜೀವ ಬಂದಂತಾಯಿತು. ಸುಗಂಧವಾದ ಮಂದಗಾಳಿಯು ಅಲ್ಲೆಲ್ಲ ಪಸರಿಸಿತ್ತು. ಜೀವಾಪಾಯದಿಂದ ಪಾರಾಗಿದ್ದೆ. ಕೈಯಲ್ಲಿದ್ದ ಕತ್ತಿಯೂ ಜಾರಿಹೋಗಿತ್ತು. ಕೊಳದಿಂದೆದ್ದು ಬಂದೆ. ಗಾಢವಾದ ದಿವ್ಯಮೌನ ಮಡುಗಟ್ಟಿತ್ತು. ನೆರಳು ಎಲ್ಲಿ ಕರಗಿ ಹೋಯಿತೆಂದು ಸುತ್ತಲೂ ಹುಡುಕಿದೆ. ಇದು ರಾಮರಾಯನ ಸ್ವರ್ಗವೊ ಸದಾಶಿವರಾಯನ ನರಕವೊ ತಿಳಿಯದಂತಾಯಿತು. ಈ ಹಿಂದೆ ಕಂಡಿದ್ದ ಕೂಪದ ತಾಣಗಳಿಗಿಂತಲೂ ಈ ಜಾಗವು ಭಿನ್ನವಾಗಿತ್ತು. ಭಾಗಶಃ ಈ ಕೊಳದ ನೀರನ್ನೆ ಇಲ್ಲಿ ಎಲ್ಲರೂ ಬಳಸುವರೆನಿಸಿತು. ಮುಂದೇನು ಎಂದು ಯೋಚಿಸಿದೆ. ವಿಶಾಲ ಗವಿಯ ಮೂಲೆಗಳಲ್ಲಿ ಮಂದವಾಗಿ ದೀಪಗಳು ಉರಿಯುತ್ತಿದ್ದವು. ಮತ್ತಾವ ವಿಪತ್ತು ಬಂದೆರಗುವುದೊ ಮೂಲೆಯ ಬಾಯನ್ನೆ ದಿಟ್ಟಿಸಿದೆ. ಅಸ್ಪಷ್ಟ ಆಕೃತಿಯ ಇಬ್ಬರು ಬರುತ್ತಿರುವುದು ಕಾಣಿಸಿತು. ಅವರ ನಡಿಗೆಯಿಂದಲೇ ಅವರು ಸ್ತ್ರೀಯರೆಂದು ತೀರ್ಮಾನಿಸಿದೆ. ಇಲ್ಲೂ ಇವರ ಪಾತ್ರವಿದೆಯೆ ಎಂದು ಅವರತ್ತಲೇ ಗಮನಿಸಿದೆ. ನೇರ ಬಂದವರೇ ಅವರು ನನ್ನ ಮುಂದೆಯೇ ನಿಂತರು.

'ನಿಮ್ಮಿಂದ ಯಾವ ತೊಂದರೆಯೂ ಇಲ್ಲ ತಾನೆ'

'ನಿಮ್ಮನ್ನು ಉಪಕರಿಸಲು ಬಂದವರು ನಾವು'

'ರಾಮರಾಯ ನಿಮ್ಮಿಂದ ಎಂತಹ ಉಪಕಾರ ಮಾಡಿಸುವನೆಂದು ಬಲ್ಲೆ'

'ಅದು ಹಳೆಯ ಮಾತು. ಇದು ಸದಾಶಿವರಾಯರ ಸತ್ಕಾರ'

'ಓಹೋ ಹಾಗೋ, ಇದು ಸದಾಶಿವರಾಯರ ಆಸ್ಥಾನವೊ'

'ಹೆಚ್ಚು ಮಾತು ಬೇಡ, ನಮ್ಮನ್ನು ಹಿಂಬಾಲಿಸಿ'

'ಎಲ್ಲಿಗೆ'

'ಕರೆದೊಯ್ದಲ್ಲಿಗೆ'

'ಅಲ್ಲಿ ನೇಣು ಬಿಗಿಯುವಿರೊ, ವಿಷವಿಕ್ಕುವಿರೊ ಕೂಪಕ್ಕೆ ನೂಕುವಿರೊ'

'ಸದಾಶಿವರಾಯರ ಸನ್ನಿಧಿಗೆ ಕರೆದೊಯ್ಯುವೆವು'

'ಕೊಲ್ಲಲು ಬಂದಿದ್ದ ನೆರಳು ಎಲ್ಲಿ ಹೋಯಿತು....'

'ಯಮಲೋಕಕ್ಕೆ ಹೊರಡಲು ಅಣಿಯಾಗುತ್ತಿರಬಹುದು'

'ಇದು ಯಮನ ಆಸ್ಥಾನವಲ್ಲವೇ'

'ಮಾತಿನಲಿ ಎಚ್ಚರವಿರಲಿ.... ಸುಮ್ಮನೆ ಹಿಂಬಾಲಿಸಿ'

ಆ ಸ್ತ್ರೀಯರು ಬಲವಾಗಿಯೇ ಇದ್ದರು. ಸೊಂಟದಲ್ಲಿ ಕಠಾರಿಗಳಿದ್ದವು. ಬರ್ಜಿಯ ಮೊನೆ ವಿಷವನ್ನು ಮೆತ್ತಿಕೊಂಡಿತ್ತು. ಬೀಸಿದ ಕತ್ತಿಯ ಹೊಡೆತಕ್ಕೆ ನೆರಳು ಸಿಲುಕಿ ಜೀವ ಬಿಟ್ಟಿತೊ ಏನೊ ಒಂದೂ ತಿಳಿಯಲಿಲ್ಲ. ನೂರು ಹೆಜ್ಜೆಗಳ ಒಳದಾರಿಯನ್ನು ಬಳಸಿದ ಮೇಲೆ ಮತ್ತೊಂದು ವಿಶಾಲ ನೆಲೆ ಎದುರಾಯಿತು. ಇಲ್ಲಿ ಕೂಡ ಕತ್ತಲೆಯೇ. ಹೆಂಗಸರು ಸುರಂಗದಲ್ಲಿ ಹೇಗೆ ಬದುಕುವರೊ ಎಂದು ಅಚ್ಚರಿಯಾಯಿತು. ಇವರನ್ನೆಲ್ಲ ಸುಮ್ಮನೆ ಇಂತಲ್ಲಿ ನೇಮಿಸಿರುವುದಿಲ್ಲ. ಬಲವಾದ ರಾಜತಾಂತ್ರಿಕ ತಂತ್ರಗಳು ಕೆಲಸ ಮಾಡಿರುತ್ತವೆ. ಸಂಚಿಗೆ ಹತ್ಯೆಗೆ ರಕ್ತಪಾತದ ಸುಗ್ಗಿಗೆ ಎಲ್ಲ ಸಾಮ್ರಾಜ್ಯಗಳು ಸ್ತ್ರೀಯರನ್ನು ಕ್ರೂರವಾಗಿ ಬಳಸಿಕೊಳ್ಳುವುದನ್ನು ತಿಳಿದು ಸಾಕಾಗಿತ್ತು. ರಣರಂಗದ ಶೂರಾಧಿ ಧೀರ ಸೇನಾನಿಗಳು ಗೆಲ್ಲಲಾಗದ್ದನ್ನೆಲ್ಲ ಸಾಮ್ರಾಟರು ಅಮಾಯಕ ಹೆಣ್ಣುಗಳಿಂದ ಮಾಡಿಸಿ ದೇವರ ಹೆಸರಲ್ಲಿ ದಿಗ್ವಿಜಯವನ್ನು ಆಚರಿಸುತ್ತಾರೆ. ಇರಲಿ, ಮುಂದಾಗುವುದನ್ನು ಕಾಣುವ ಎಂದು ಸಂದಿಯ ಇರುಕಲಿನಲ್ಲಿ ತೆವಳಿಕೊಂಡು ಮುಂದೆ ಬಂದೆ. ಹೆಂಗಸರ ಸಾಹಸವನ್ನು ಮೆಚ್ಚಲೇಬೇಕು. ಯುದ್ಧಭೂಮಿಗೆ ಹೆಂಗಸರೇ ಸಮರ್ಥರಿರಬೇಕು. ಬರ್ಬರವಾಗಿ ಕಡಿದಾಡುವ ಸೈನಿಕರಿಗಿಂತ ಮೋಹಕವಾಗಿ ಎದುರಾಳಿಯ ಗುಂಡಿಗೆಯನ್ನು ಕರಗಿಸಿಬಿಡುವ ಹೆಣ್ಣ ಶಕ್ತಿಯೇ ಅಪಾರವಾದದ್ದು. ರಕ್ತಪಾತವಿಲ್ಲದ ಯುದ್ಧ ಇವರಿಗೇ ಒಲಿದಿದೆ. ಮೃತ್ಯುವಿನ ದವಡೆಯಿಂದ ಜಿಗಿದ್ಹೊರಗೆ ಬಂದ ತನಗೆ ಈಗ ಈ ಕ್ಷಣದ ಈ ಹೆಂಗಸರ ಸಾಮೀಪ್ಯವೇ ಅಪ್ಯಾಯಮಾನವಾಗಿ ಕಂಡು ವಿಸ್ಮಿತನಾದೆ. ಮೃತ್ಯುವನ್ನು ಹೆಣ್ಣದೇವತೆಯ ಮೂಲಕ ಕಂಡವರು ಅಧಮರೇ ಇರಬೇಕು. ಜೀವದಾಯಿಯಾದ ಸ್ತ್ರೀಯರನ್ನು ಸಾವಿನ ರೂಪದಲ್ಲಿ ಕಂಡದ್ದು ಅಪಚಾರ. ಮತ್ತೆ ಅಸ್ಪಷ್ಟವಾದ ಬೆಳಕು ಮೂಡಿತು. ಆ ಹೆಂಗಸರು ಮರೆಗೆ ಸರಿದರು. ನಾನೊಬ್ಬನೇ ನಿಂತೆ. ತಲೆಬುರುಡೆಯನ್ನು ತಿನ್ನು ಎಂದು ತಟ್ಟೆಯಲ್ಲಿಟ್ಟು ತಂದಿದ್ದ ಮುದಿ ನೆರಳು ನಿಧಾನವಾಗಿ ಆವಿಯಾಗಿ ಬಂದಂತೆ ಗೋಚರಿಸಿತು. ಹುಸಿನಗೆಯನ್ನು ಬೀರುತ್ತಿರುವಂತೆ ಕಂಡಿತು. ತೀಕ್ಷ್ಣವಾಗಿ ಕಣ್ಣುಗಳ ಅಗಲಿಸಿ ದಿಟ್ಟಿಸಿದೆ. ಏಕಕಾಲಕ್ಕೆ ಹತ್ತಾರು ರೂಪಗಳು ಆ ಒಂದೇ ಮುಖದಲ್ಲಿ ತೇಲಿದಂತಾಯಿತು. ಯಾವುದಕ್ಕೂ ಖಚಿತ ರೂಪವಿಲ್ಲ. ಮಸಿಮಯ ಮುಖಗಳೇ ನೋಡಿದರೆ ಮುತ್ತಿನ ತರಾವರಿ ಆಯುಧಗಳು ಕೈಯ ಬೆರಳುಗಳು ಹುಲಿಯ ಪಂಜದಂತೆ ಚೂಪಾದ ಉಕ್ಕಿನ ಉಗುರುಗಳಿಂದ ಮಾಂಸಖಂಡಗಳ ಕಿತ್ತುಬಿಡಲು ಹಾತೊರೆಯುತ್ತಿವೆ.

ಮನಸ್ಸನ್ನು ವಜ್ರಕಠೋರವಾಗಿಸಿಕೊಂಡು ಮೈಯನ್ನೆ ಉಕ್ಕಿನ ಕವಚವಾಗಿಸಿ ನಾನೂ ನಕ್ಕೆ. ನೆರಳಿಗೆ ಅಪಮಾನವಾದಂತೆನಿಸಿ ಅದು ಕೂಡ ಘೋರವಾಗಿ ನಗಾಡಿತು.

'ಬಾ, ನನ್ನನ್ನು ಕೊಂದು ಬಿಡು, ನೆರಳಿನ ಸಾಮ್ರಾಜ್ಯಕ್ಕೆ ಸಮಾಧಾನವಾಗಲಿ'
'ನನ್ನನ್ನು ಕೊಲ್ಲಲು ಬಂದವನೇ ತನ್ನನ್ನು ಕೊಂದು ಬಿಡು ಎಂದು ಕೇಳುವುದು
ರಾಜತಾಂತ್ರಿಕನ ಮತ್ತಾವುದೊ ಕುತಂತ್ರದಂತಿದೆ'
'ನನಗೆ ಖಚಿತವಾಗುತ್ತಿದೇ.... ನೀವು ಮಹಾಪ್ರಭು ಸದಾಶಿವರಾಯರಲ್ಲವೇ'
'ಹೌದು. ನಾನೇ ಈ ಕೂಪ ಸಾಮ್ರಾಜ್ಯದ ದೊರೆ'
'ನನ್ನ ಪರಮ ದೊರೆಯೇ ನಾನು ನಿಮ್ಮ ಹಿತಕಾಯಲು ಬಂದವನು'
'ಈ ಎಲ್ಲ ನೆರಳಿನಾಟ ಯಾಕೆ, ನಾನು ನಿಮ್ಮ ಸೇವಕ ಮಾತ್ರ'
'ಸುಳ್ಳಿನ ಸೌಂದರ್ಯ ಹೇಗಿದೆ ಎಂಬುದನ್ನು ನಾನು ಬಲ್ಲೆ. ನಿನ್ನಲ್ಲಿ ನನಗೆ ನಂಬಿಕೆ
ಇಲ್ಲ. ನಿನ್ನಲ್ಲೇನೊ ಸಂಚಿದೆ'
'ನನ್ನ ಮೇಲೆ ಒಂದಿಷ್ಟಾದರೂ ಕರುಣೆಯಿರಲಿ ದೊರೆಯೇ'
"ಸಾಕ್ಷಾತ್ ಯೋಗೀಂದ್ರ ಅವರ ಆದೇಶದ ಮೇರೆಗೆ ತಮ್ಮ ಬಳಿಗೆ
ನಾನು ನನ್ನ ಪ್ರಾಣವನ್ನೆ ಪಣವಾಗಿಟ್ಟು ಬಂದಿರುವೆ. ದಯಮಾಡಿ ನನ್ನ ನಂಬಿ
ಸಾಮ್ರಾಟರ ಅರ್ಥಕೋಶದಲ್ಲಿ ನಂಬಿಕೆ ಎನ್ನುವ ಪದವೇ ಇಲ್ಲ.
ಅನುಮಾನದಿಂದದಾರೂ ನನ್ನನ್ನು ಪರೀಕ್ಷಿಸಬಹುದಲ್ಲಾ ಸ್ವಾಮಿ"
"ಪರೀಕ್ಷಿಸುತ್ತಲೇ ಇದ್ದೇನೆ. ನಮ್ಮ ಶಂಕೆ ಅಧಿಕವಾಗುತ್ತಲೇ ಇದೆ"
'ಅದಕ್ಕೆಂದೇ ಪ್ರಾರ್ಥಿಸಿದ್ದು ನನ್ನನ್ನು ಕೊಂದು ಬಿಡಿ. ಸಾಮ್ರಾಜ್ಯವು ಚಿರಾಯುವಾಗಲಿ'
'ನನ್ನ ಕೂಪ ಸಾಮ್ರಾಜ್ಯವನ್ನು ಕುಹಕದಿಂದ ಹಂಗಿಸುವೆಯಾ'
'ಈ ನರಕವೇ ತಮಗೆ ಹಿತವೇ'
'ಹೌದೌದು. ನನ್ನೀ ಸಾಮ್ರಾಜ್ಯವನ್ನು ಯಾರೂ ಕಸಿಯಲಾರರು'
''ನನ್ನ ದೊರೆತನವಿಲ್ಲಿ ಅಜರಾಮರ
ನನ್ನ ಸ್ವರ್ಗವಿಲ್ಲಿ ನಿತ್ಯ ನಿರಂತರ
ನನ್ನನ್ನು ಯಾರೂ ಸೋಲಿಸಲಾರಿರಿ, ಕೊಲ್ಲಲಾರಿರಿ. ಹಿಡಿದು ಬಂಧಿಸಲಾರಿರಿ
ಹಹ್ಹಹಾ ನನ್ನ ಕೂಪ ಸಾಮ್ರಾಜ್ಯದ ಕತ್ತಲು ಎಂದೆಂದೂ ಅಳಿಯುವುದಿಲ್ಲ
ಯಾರ ದಿಗ್ವಿಜಯಗಳೂ ಇಲ್ಲಿ ಉಳಿಯುವುದಿಲ್ಲ, ಯಾವ ಕೇಡೂ ಕಳೆಯುವುದಿಲ್ಲ
ನಿನ್ನ ರಾಮರಾಯ ಎಂದೆಂದೂ ನನ್ನ ಕೊಲ್ಲಲಾರ. ಕೊಲ್ಲಲು ಬಂದವರಿಲ್ಲಿ
ಉಳಿಯುವುದಿಲ್ಲ"
'ಮಹಾ ದೊರೆಯೇ, ನಿಮ್ಮ ದುಸ್ವಪ್ನಗಳು ನಿಮ್ಮನ್ನು ಬೇಟೆ ಆಡುತ್ತಿಲ್ಲವೇ'
'ನಿನ್ನನ್ನು ಕೊಲ್ಲುವುದಿಲ್ಲ. ರಾಮರಾಯನ ದುಷ್ಟ ಸಂಚುಗಳು ಹೇಗೆ ನಡೆದಿವೆ
ತಿಳಿಸು'

ಈ ಪ್ರಶ್ನೆಗೆ ಏನು ಉತ್ತರ ಕೊಟ್ಟರೂ ಅಪಾಯವೆಂಬುದನ್ನು ಅರಿತೆ. ಅತ್ತ ರಾಮರಾಯನ ಕತ್ತಿ, ಇತ್ತ ಸದಾಶಿವರಾಯನ ಕತ್ತಿ. ಎರಡೂ ಒಂದೇ. ಎರಡೂ ಕತ್ತಿಗಳ ನಡುವೆ ನನ್ನ ರುಂಡವಿರುವುದನ್ನು ಮರೆಯುವಂತಿಲ್ಲ. ಕ್ಷಣಕಾಲ ಮೌನವಹಿಸಿದೆ. ಸದಾಶಿವರಾಯ ಈ ಸ್ವರೂಪದಲ್ಲಿರುವನೆಂದು ನಾನು ಊಹೆ ಕೂಡ ಮಾಡಿರಲಿಲ್ಲ. ದಾರುಣಸ್ಥಿತಿಯಲ್ಲಿ ಅರೆಜೀವವಾಗಿರುವ ಆತನನ್ನು ಕಾಯುವುದೇ ತನ್ನ ಧ್ಯೇಯ ಎಂದು ಬಂದರೆ ಇಲ್ಲಿ ಆ ವ್ಯಕ್ತಿಯೇ ತನ್ನನ್ನೀಗ ಜೀವನ್‌ಮರಣದ ಪ್ರಶ್ನೆಗೆ ಸಿಲುಕಿಸಿರುವುದು ವಿಚಿತ್ರ. ತಕ್ಷಣ ಉತ್ತರ ಕೊಡದಿದ್ದರೂ ಕಷ್ಟವೇ. ಸದಾಶಿವರಾಯನ ಮಾತುಗಳಲ್ಲಿ ವಿಭ್ರಮೆಯೇ ತುಂಬಿ ತುಳುಕಾಡುತ್ತಿದೆ. ಒಂದೊಂದು ಮಾತಿಗೂ ಸಂಬಂಧವಿಲ್ಲ. ನೆರಳಿನಂತೆಯೇ ಮಾತುಗಳು ಅಮೂರ್ತವಾಗಿವೆ. ಅಂತೆಯೇ ಚಂಚಲವಾಗಿ ಸಂಶಯದಿಂದ ನರಳುತ್ತಿವೆ. ಸರಿಯಾಗಿ ಸದಾಶಿವರಾಯನ ಮುಖವೇ ಕಾಣುತ್ತಿಲ್ಲ. ಅವನ ಬೆಳಕನ್ನು ಕಿತ್ತುಕೊಂಡಾಗಿಬಿಟ್ಟಿದೆ. ಕತ್ತಲೇ ಅವನಿಗೆ ಸರ್ವಸ್ವ ಎನಿಸಿದೆ. ಇಂತಲ್ಲಿ ರಾಮರಾಯನ ಸಂಚು ಏನಿದೆಯೊ ಅದು ನನಗಿಂತಲೂ ಸ್ವತಃ ಸದಾಶಿವರಾಯನಿಗೇ ಚೆನ್ನಾಗಿ ತಿಳಿದಿರಬೇಕು. ಅದರಿಂದಲೇ ನನ್ನ ಮೇಲೇ ಎಲ್ಲ ಅನುಮಾನ.

"ನನ್ನ ಚಕ್ರವರ್ತಿಯೇ, ಮಹಾಮಾಂಡಲೀಕರಾದ ಶ್ರೀಮಾನ್ ರಾಮರಾಯರು ಯಾವ ಸಂಚಿಗೂ ನನ್ನನ್ನಿಲ್ಲಿಗೆ ಕಳುಹಿಸಿಲ್ಲ. ಪರಿಹರನಾಣೆಗೂ ನಾನು ನಿಮ್ಮ ಒಳಿತಿಗಾಗಿ ಬಂದವನೇ ವಿನಃ ಸಂಚಿಗಾಗಿ ಬಂದವನಲ್ಲ. ನನ್ನ ಮೇಲೆ ನಿಮಗೆ ಒಂದಿನಿತೂ ಕರುಣೆಯಿಲ್ಲ. ಸ್ನೇಹದ ಹಳೆಯ ನೆನಪೂ ಇಲ್ಲ. ಕನಿಷ್ಠ ಸೇವಕನೆಂಬ ವಿಶ್ವಾಸವೂ ಇಲ್ಲ. ನಿಮ್ಮನ್ನು ಕಾಣಲು ಎಷ್ಟೊಂದು ಸಂತೋಷದಿಂದ ಬಂದೆ ಎಂಬುದನ್ನು ತಾವು ಕಲ್ಪಿಸಲಾರಿರಿ. ದಯಮಾಡಿ ನನ್ನ ಮೇಲೆ ಕೊನೆಯ ಬಾರಿಗೆಂದು ಒಂದಿಷ್ಟಾದರೂ ಕೃಪೆ ತೋರಿ"

'ಏನದು ನಿನ್ನ ಕೋರಿಕೆ ಹೇಳು. ನನ್ನ ಕೃಪೆಯಿಂದ ನೆರವೇರುವುದಾದರೆ ಆಗಲಿ'

'ಈ ಕತ್ತಲ ಕೂಪದಿಂದ ದೂರ ಹೋಗೋಣ ದೊರೆಯೇ'

'ಸಾಧ್ಯವಿಲ್ಲ. ಸೂರ್ಯ ಸತ್ತು ಹೋಗಿದ್ದಾನೆ'

'ನಕ್ಷತ್ರಗಳಾದರೂ ಇವೆಯಲ್ಲ ಪ್ರಭುವೇ'

'ಆ ನಿನ್ನ ನಕ್ಷತ್ರಗಳನ್ನು ಆಸ್ಥಾನದ ಕವಿಗಳಿಗೆ ತೋರಿಸಬೇಕಷ್ಟೇ'

'ರಾಮರಾಯರ ಅದ್ದೂರಿ ಸಾಮ್ರಾಜ್ಯದಲ್ಲಿ ಬೆಳಕಿಗೆ ಕೊರತೆಯೇ ದೊರೆಯೇ'

'ಕೊಳೆತು ಹೋಗಿರುವ ಆ ಬೆಳಕಿನಲ್ಲಿ ನಾನು ಉಸಿರಾಡಲಾರೆ. ನನ್ನ ಕೂಪದಲ್ಲೇ ನನಗೆ ಸ್ವರ್ಗವಿದೆ. ರಾಮರಾಯ ನನಗೆ ನಿರ್ಮಿಸಿರುವ ಈ ಕೂಪ ಸೆರೆಯೇ ನನಗೆ ಸಾಮ್ರಾಜ್ಯವಾಗಿದೆ. ನನಗವನು ಒಳಿತೇ ಮಾಡಿರುವನು. ರಾಮರಾಯನೇ ಬಂದರೂ ಈ ಕೂಪದಿಂದ ಬದುಕಿ ಹೊರಗೆ ಹೋಗಲಾರ. ಈ ಕೂಪವೇ ಸಾಮ್ರಾಜ್ಯದ ತಳಪಾಯ. ನೀವು ಯಾರೂ ನನ್ನ ಸಾರ್ವಭೌಮತ್ವವನ್ನು ನಾಶಪಡಿಸಲಾರಿರಿ. ನನಗೆ ನಿಮ್ಮ ಯಾವ ಚಿಕಿತ್ಸೆಯೂ ಬೇಕಿಲ್ಲ. ನೀನು ಇಲ್ಲಿಗೆ ಬರುವ ಮುನ್ನವೇ ಎಲ್ಲವನ್ನು ತಿಳಿದುಕೊಂಡಿರುವೆ. ನನ್ನ ದುಸ್ವಪ್ನಗಳ ಸಹವಾಸ ನಿನಗೆ ಬೇಡ. ನಿನ್ನ ಮನೋಬಲವನ್ನು ನೀನೇ ಹೆಚ್ಚಿಸಿಕೋ"

"ಹಾಗೆನ್ನದಿರಿ ನನ್ನ ದೊರೆಯೇ. ನಾನು ಸುಮ್ಮನೆ ಹಿಂತಿರುಗಿದರೂ ಅಪಾಯವೇ ರಾಮರಾಯ ನನ್ನ ಮೇಲೆ ಸಂಶಯ ಪಡುವುದು ಹೆಚ್ಚಾಗುತ್ತದೆ.
ಯಾವ ದುರದ್ದೇಶವೂ ಇಲ್ಲದೆ ದುಷ್ಟನೆಂದು ರಾಜದಂಡನೆಗೆ ಹೀಡಾಗುವ ಪರಿಸ್ಥಿತಿಯನ್ನು ನೀವು ಮಾತ್ರ ಗ್ರಹಿಸಬಲ್ಲಿರಿ"

"ಹಾಗಾದರೆ ನಿನಗೆ ಅದೇ ತಕ್ಕ ಶಿಕ್ಷೆ. ನನ್ನ ಕೂಪಕ್ಕೆ ಬಂದವರಾರೂ ಜೀವಂತವಾಗಿ ಹೊರಗೆ ಹೋಗುತ್ತಿರಲಿಲ್ಲ. ನಿನ್ನನ್ನು ಬಿಟ್ಟುಬಿಡುತ್ತಿರುವೆ, ಹೊರಟು ಹೋಗು. ರಾಮರಾಯನ ಮುಂದೆ ನಿನ್ನ ಪ್ರಲಾಪವನ್ನು ಮಂಡಿಸು. ನಿನ್ನನ್ನು ಮುಗಿಸಲಿಚ್ಛಿಸಿಯೇ ಇಲ್ಲಿಗೆ ಆತ ಕಳಿಸಿದ್ದನ್ನು ನಾನು ಪೂರೈಸಲಾರೆ. ಅವನೇ ನಿನ್ನನ್ನು ಪೂರೈಸಿಬಿಡಲಿ.... ಅಥವಾ ಅವನೇ ನಿನ್ನನ್ನು ಉಳಿಸುವುದಾದರೆ ಉಳಿಸಲಿ"

ಇಷ್ಟು ಹೇಳುತ್ತಿದ್ದಂತೆಯೆ ಮತ್ತೂ ದಟ್ಟ ಕತ್ತಲು ಚಾಚಿ ನೆರಳು ಮಾಯವಾಯಿತು. ದೊರೆಯೇ ನನ್ನನ್ನು ಮನ್ನಿಸಿ ಎಂದು ಬೇಡಿದರೂ ಸದಾಶಿವರಾಯ ಮರುಮಾತನಾಡಲಿಲ್ಲ. ಮತ್ತದೇ ಸ್ತ್ರೀಯರು ನನ್ನ ತೋಳುಗಳ ಹಿಡಿದೆತ್ತಿ ನಿಲ್ಲಿಸಿ ಮತ್ತೆಲ್ಲಿಗೊ ಎಳೆದುಕೊಂಡು ನಡೆದಂತೆಯೇ ಹೊರಟರು. ನನಗೆ ಪ್ರಜ್ಞೆಯೂ ಕತ್ತಲಿಟ್ಟಿತ್ತು. ಬಸವಳಿದ ಆತ್ಮವು ಮಂದಾರಾ ಎಂದು ಕೂಗಿಕೊಂಡಿತು. ತನಗೇಕೆ ಈ ಶಿಕ್ಷೆ ಎಂಬುದೇ ತಿಳಿಯಲಿಲ್ಲ. ಗುಪ್ತಾಚಾರರು ನನ್ನ ಬಗ್ಗೆ ಯಾವ ಅನುಮಾನಗಳನ್ನು ರಾಮರಾಯನ ತಲೆಯಲ್ಲಿ ಬಿತ್ತಿರುವರೊ ಏನೊ. ಯಾರೊ ಬಂದು ನನ್ನ ಕಣ್ಣಿಗೆ ಬಲವಾಗಿ ಬಟ್ಟೆ ಕಟ್ಟಿದರು. ಇಂತಹ ಕತ್ತಲೆಯಲ್ಲಿ ಇದರ ಅವಶ್ಯಕತೆಯೇ ಎಂದುಕೊಳ್ಳುತ್ತಿರುವಂತೆಯೇ ಕಿವಿಗಳನ್ನೂ ಭದ್ರಪಡಿಸಿದರು. ಹಿಂದೊಬ್ಬ ಮುಂದೊಬ್ಬರಂತೆ ಸುರಂಗ ದಾರಿಯಲ್ಲಿ ಮುನ್ನಡೆಸಿದರು. ನೂರು ಹೆಜ್ಜೆಗಳಿಗೆ ಒಮ್ಮೆಯಂತೆ ನನ್ನನ್ನು ಗಿರಿಗಿರಿಸುತ್ತಿಸಿ ತಲೆ ಸುತ್ತುವಂತೆ ಮಾಡಿ ಬಿದ್ದರೂ ಬಿಡದೆ ನೂಕಿಕೊಂಡು ದೌಡಾಯಿಸುತ್ತಿದ್ದರು. ಕೆಲವೆಡೆ ದರದರ ಎಳೆದೊಯ್ದರು. ಅರೆ ಜೀವವಾಗಿದ್ದೆ. ಸುತ್ತಿ ಬಳಸಿ ತೆವಳಿ ಧುಮುಕಿ ಸಾಗುವಲ್ಲಿ ಸಾಕಷ್ಟು ಗಾಯಗಳಾಗಿದ್ದವು. ಒಂದು ಇಡೀ ಹಗಲಿನಷ್ಟು ದೂರವನ್ನು ದಾಟಿ ಆಗಿತ್ತು. ಮತ್ತೆ ಮತ್ತೆ ಸುರುಳಿ ಸುಳಿ ಸುತ್ತಿದಂತೆ ನನ್ನನ್ನು ಆ ದೈತ್ಯರಿಬ್ಬರೂ ಸುತ್ತಿಸಿದರು. ಪ್ರಜ್ಞೆಯೇ ಸುತ್ತುತ್ತಿತ್ತು. ಎಳೆದುಕೊಂಡು ಬಂದು ನೂಕಿದರು. ಉರುಳುರುಳಿಕೊಂಡು ದಟ್ಟಪೊದೆಗಳ ಹಿಡಿದಿಡಿದು ಜಾರಿ ಬಿದ್ದೆ. ಗವಿಯ ಆಚೆಗೆ ತಳ್ಳಿದರೆಂಬುದು

ಖಾತ್ರಿ ಆಗಿತ್ತು. ಮೈಕೈ ತರಚಿಕೊಂಡು ಕಲ್ಲುಬಂಡೆಯ ಸಂದಿಯಲ್ಲಿ ಸಿಲುಕಿದೆ. ಜೀವ ಕೃಶವಾಗಿತ್ತು. ಗಾಢಾಂಧಕಾರ ಆಕಾಶದಲ್ಲಿ ಗಸ್ತು ತಿರುಗುತ್ತಿತ್ತು. ಅನತಿದೂರ ಮಾತ್ರದ ತಾರೆಗಳು ನನ್ನ ಕಂಡು ಹುಲುಮಾನವನೇ ಎಂದಂತಿತ್ತು. ಯಾರು ಯಾರಿಗೆ ಹಿತವರು ಯಾರು ಯಾರ ರಕ್ಷಕರು, ಯಾರು ಯಾವ ಮುಸುಕಿನ ಶತ್ರುಗಳು, ಯಾವ ಕ್ರಿಯೆ ಯಾವ ಪರಿಣಾಮದ ಫಲ, ಯಾವ ಆಪತ್ತು ಯಾವ ನಾಳೆಯ ಬೆಳಕೊ ಯಾವ ಕನಸು ಮತ್ತಾವ ದುಸ್ವಪ್ನದ ತುದಿಯೊ.... ಅಂತಹ ಗಾಢ ವ್ಯಥೆಯ ಇರುಳಲ್ಲಿ ಯಾರೊ ನನ್ನನ್ನೆ ನನ್ನೊಳಗೇ ಕೇಳಿದಂತಾಯಿತು. ಭಾಗಶಃ ಆತ್ಮವಿರಬೇಕು. ಕಣ್ಣಿಗೆ ಕಾಣದ ಆತ್ಮದ ಬೆಳಕೇ ಕೊನೆಗುಳಿವ ದಾರಿಯೇ..... ನನ್ನ ನಾಳೆಯ ಗತಿ ಮತ್ತಾವ ತುದಿಯ ಸಂಕಟವೊ.... ದೂರದಾಚೆಯ ಅರಿವನ್ನು ಗ್ರಹಿಸಲಾರದೆ ತತ್ತರಿಸಿದೆ.

ಈ ಸಾಮ್ರಾಜ್ಯದ ಹಂಗುತೊರೆದು ಕಣ್ಮರೆಯಾಗಿ ಬಿಡಲೇ.... ರಾಮರಾಯನ ಸಾಮ್ರಾಜ್ಯಕ್ಕೆ ಬಂದು ಗತಿ ಕಾಣಿಸಲೇ.... ಮರಳಿ ರಾಮರಾಯನ ಮುಂದೆ ಕಣ್ಣೀರಿಟ್ಟು ಜೀವದಯೆ ಕರುಣಿಸಿ ಎಂದು ಬೇಡಲೇ.... ನಾನೇ ನನ್ನ ಜೀವವನ್ನು ಕೊಂದುಕೊಳ್ಳಲೇ.... ಮಂದಾರಳ ಮೋಹದ ದಿವ್ಯ ಪಯಣಕ್ಕಾಗಿ ಎಲ್ಲವನ್ನೂ ಮರೆತು ನಿಗೂಢವಾಗಿ ಬದುಕಿಬಿಡಲೇ.... ಇಲ್ಲವೇ ಹಿಂತಿರುಗಿ ಸದಾಶಿವರಾಯನ ನೆರಳಾಗಿಯೇ ಅಲ್ಲೇ ಆ ಕೂಪದಲ್ಲೇ ಪಿಶಾಚಿಯಾಗಿ ಅಳಿಯಲೇ.... ಬೆಳಕು ಮೂಡುವ ತನಕ ಯೋಚಿಸುತ್ತಲೇ ಇದ್ದೆ. ದೂರದ ಹಳ್ಳಿಗಳಿಂದ ಮುಂಗೋಳಿಗಳು ಕೂಗುತ್ತಿರುವುದು ಕೇಳಿಸಿತು. ದಿಗಂತದಲ್ಲಿ ಸೂರ್ಯ ಕಣ್ಣು ಬಿಡುತ್ತಿದ್ದ. ತಂಗಾಳಿ ಸೂಸಿ ಬಂತು. ಮೈಯೆಲ್ಲ ಗಾಯ, ಮನವೆಲ್ಲ ಭಾರ. ಅಂತರಂಗವೆಲ್ಲ ಸಂಕಟ. ಎದ್ದು ನಡೆಯಲೂ ಸಾಧ್ಯವಿರಲಿಲ್ಲ. ಬೆಟ್ಟದ ಕಡಿದಾದ ತುದಿಯಿಂದ ಉರುಳಿ ಬಂದದ್ದು ದಿಟವೇ ಎಂದು ನಾನೇ ನಂಬದಾದೆ. ಪೊದೆ ಪೊದೆಯ ಗಿಡಗಂಟೆಗಳನ್ನು ಕಂಡು ಧನ್ಯತೆಯಲ್ಲಿ ವಂದಿಸಿದೆ. ಇಳಿಜಾರಿನ ಕಣಿವೆ ನನ್ನ ಮೇಲೆ ಜೀವ ದಯೆ ತೋರಿತ್ತು. ತೆವಳುತ್ತ ಸಾಗಿ ರಕ್ಷಣೆಯ ತಾವಿನಲ್ಲಿ ಒರಗಿದೆ. ಹಗಲನ್ನು ಕಂಡೇ ಎಷ್ಟೋ ಕಾಲವಾದಂತಾಗಿತ್ತು. ಅನಂತವಾದ ಬೆಳಕಿನ ಆಕಾಶವನ್ನು ಮನದಲ್ಲಿ ತುಂಬಿಕೊಂಡೆ. ಕತ್ತಲ ಕೂಪ ನನ್ನ ಪ್ರಜ್ಞೆಯನ್ನೇ ಮುಸುಕಾಗಿಸಿದೆಯೇನೊ.... ಕೂಪದ ಸುರಂಗದ ದ್ವಾರ ಮೇಲೆ ಎಲ್ಲಿರಬಹುದೆಂದು ಗಮನಿಸಿದೆ. ಎಲ್ಲೂ ಅಂತಹ ಕುರುಹು ಕಾಣಲಿಲ್ಲ. ಕಿಕ್ಕಿರಿದ ಬಂಡೆಸಾಲುಗಳ ತುದಿಯನ್ನು ಹತ್ತಿ ಅಲ್ಲಿ ಯಾವುದು ಕೂಪದ್ವಾರ ಎಂದು ನಿರ್ಧರಿಸುವುದು ಯಾರಿಂದಲೂ ಸಾಧ್ಯವಿರಲಿಲ್ಲ.ಯೋಗೀಂದ್ರ ಅವರ ಆಶ್ರಯವೇ ತನಗೀಗ ಇರುವ ಆಸರೆ ಎಂದುಕೊಂಡೆ. ಇನ್ನೂ ಇಲ್ಲೇ ಮೂರ್ನಾಲ್ಕು ದಿನಗಳ ಕಾಲ ನೆಲೆಸಿ ಜೀವಬಲಮಾಡಿಕೊಂಡು ಮುಂದೆ ಸಾಗಬೇಕೆಂದು ನಿಟ್ಟುಸಿರು ಬಿಟ್ಟೆ. ಯಾರೊ ಬಂಡೆ ಮರೆಯಲ್ಲಿ ಕಂಡಂತಾಯಿತು. ಬೆಂಬಿಡದ ಸಾವ ಬೇಟೆಯೇ ಯಾಕೆ ಹೀಗೆ ಜೀವ ತಿನ್ನುವೆ ಎಂದು ಅತ್ತ ಕಡೆಯೇ ಎಚ್ಚರದಿಂದ ದಿಟ್ಟಿಸಿದೆ. ಯಾರೊ ಅರೆಬೆತ್ತಲೆಯ ಬೇಟೆಗಾರ ವಿಷದ ಬಾಣವನ್ನು ನನ್ನೆದೆಗೇ ಗುರಿಯಿಟ್ಟು ಬಿಲ್ಲನ್ನು ಎಳೆದು ಕಣ್ಣನ್ನು ಕಿರಿದುಗೊಳಿಸುತ್ತಿದ್ದ. ಎದ್ದು ಓಡಿ ಹೋಗಲೂ ಸಾಧ್ಯವಾಗದೆ ನೋವು ತಾಳದೆ ಪ್ರಯಾಸದಿಂದ ಅವನತ್ತ ಕೈ ಎತ್ತಿದೆ.

